# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಮನೆಯ ಅಧಿಕಾರವಾಗಲೀ ಊರಿನ ಅಧಿಕಾರವಾಗಲೀ, ದೇಶದ ಅಧಿಕಾರವಾಗಲೀ ತುಂಬಾ ಜವಾಬ್ದಾರಿಯ ಕೆಲಸವಾಗಿದೆ. ಅಧಿಕಾರದಲ್ಲಿರುವ ಯಜಮಾನನು ಇತರರ ಮಾತುಗಳನ್ನೂ, ಸಲಹಾಗಾರರ, ಹಿತಚಿಂತಕರ ಅಭಿಪ್ರಾಯವನ್ನೂ ಕುರುಡು ನಂಬುಗೆಯಿಂದ ನಿರಾಕರಿಸಿ ತನಗೆ ತೋರಿದಂತೆ ಪ್ರವರ್ತಿಸಿದರೆ ವಿಪರೀತಕ್ಕೆ ಮುಟ್ಟುತ್ತದೆ. ಈ ಸಂಚಿಕೆಯ "ಕಳ್ಳರ ಕಾಟ" ಎಂಬ ಕಥೆಯಿಂದ ಇದನ್ನು ಮನಗಾಣಬಹುದು,

## ಅಮರವಾಣಿ

ಸೌಲಭ್ಯ ಲಭ್ಯ ವಸ್ತೂನಾ ಮನಜ್ಞಿನ ನ ಗೌರವಮ್
ಮಲಯೇ ಭಿಲ್ಲ ಕಾಂತಾನಾಂ ಚಂದನಂ ಚಂದನಾಯ ತೇ

ಸುಲಭವಾಗಿ ಲಭಿಸುವ ವಸ್ತುಗಳ ಮೇಲೆ ಯಾರಿಗಾದರೂ ತಿರಸ್ಕಾರ ಭಾವವೇ ಹೊರತು. ಗೌರವವಿರಲಾರದು. ಚಂದನ ವೃಕ್ಷಗಳಿರುವ ಮಲಯ ಪರ್ವತದಲ್ಲಿಯ ಭಿಲ್ಲ ಸ್ತ್ರೀಯರು ಚಂದನವನ್ನು ಸೌದೆಯಾಗಿ ಮಾಡಿ ಉರಿಸುತ್ತಾರೆ.

---

ಸಂಪುಟ : ೭೩   ಆಗಸ್ಟ್ '೮೪   ಸಂಚಿಕೆ : ೨

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ಎದೆನೋವು ತಗ್ಗಿಸುವ ಸಾಕು ಪ್ರಾಣಿಗಳು

ನಾಯಿ, ಬೆಕ್ಕು, ಗಿಣಿ, ಪಾರಿವಾಳ ಮೊದಲಾದ ಪ್ರಾಣಿಗಳನ್ನೂ, ಪಕ್ಷಿಗಳನ್ನೂ ಮನೆಯಲ್ಲಿ ಬೆಳೆಸುವುದರಿಂದ ವಿನೋದವಾಗಿ ಹೊತ್ತು ಹೋಗುವುದಷ್ಟೇ ಅಲ್ಲದೆ, ಎದೆಯ ರಕ್ತ ಪ್ರಸರಣಕ್ಕೆ ಸಂಬಂಧಿಸಿದ ರೋಗಗಳೂ ಬಾರದಂತಾಗುತ್ತದೆಂದು ಸಂಶೋಧನೆಯ ಮೂಲಕ ಬೆಳಕಿಗೆ ಬಂದಿದೆ. ಮನುಷ್ಯ ಮತ್ತು ಪ್ರಾಣಿಗಳೊಳಗಿನ ಸಂಬಂಧವನ್ನು ಕುರಿತು ಸ್ವೀಡನ್ನಿನ ಗೋಥೆನ್ ಬರ್ಗ್‌ನಲ್ಲಿ ಇತ್ತೀಚೆಗೆ ನಡೆದ ಒಂದು ಸದಸ್ಸಿನಲ್ಲಿ, ಈ ವಿಷಯವನ್ನು ಹಲವುಮಂದಿ ಶಾಸ್ತ್ರ ಸಂಶೋಧಕರು ಪ್ರಕಟಪಡಿಸಿದರು.

## ಭೂಕಂಪಗಳನ್ನು ಸೂಚಿಸುವ ಪ್ರಾಣಿಗಳು



ಕೆಲವು ಪ್ರಾಣಿಗಳ ನಡವಳಿಕೆಗಳನ್ನು ಪರಿಶೀಲಿಸುವುದರ ಮೂಲಕ ಬರಲಿರುವ ಭೂಕಂಪಗಳನ್ನು ಮುಂದಾಗಿ ಗುರುತಿಸಿಕೊಳ್ಳಬಹುದು. ಎನ್ನುತ್ತಾರೆ, ಪ್ರಮುಖ ಭೂಕಂಪನ ಶಾಸ್ತ್ರಜ್ಞರಾದ ಡಾಕ್ಟರ್ ಹೆಚ್. ಎನ್. ಶ್ರೀವಾತ್ಸವ.

ಭೂಕಂಪಗಳನ್ನು ಮುಂದಾಗಿ ತಿಳಿದುಕೊಳ್ಳುವುದು ಹೇಗೆ? ಎಂಬ ತನ್ನ ಗ್ರಂಥದಲ್ಲಿ ಡಾಕ್ಟರ್ ಶ್ರೀವಾತ್ಸವಾರು ಈ ವಿಷಯವನ್ನು ಅನೇಕ ಉದಾಹರಣೆಗಳಿಂದ ವಿವರಿಸಿದ್ದಾರೆ. ಜಪಾನಿನ ನಾಗೋಯಾ ನಗರದಲ್ಲಿ ಇಲಿಗಳು ವಿಪರೀತವಾಗಿದ್ದುವು. ಆದರೂ ಅವೆಲ್ಲಾ ೧೯೪೧ ನೇ ವರ್ಷದಲ್ಲಿ ಒಮ್ಮೆಗೇ ಮಾಯವಾಗಿ ಹೋದುವು. ಅದರ ಮರುದಿನವೇ ನೋವೀ ಭೂಕಂಪ ಬಂದಿತು.

ಚೈನಾದ ಟೀಯಂಟ್ಸಿನ್ ಪ್ರಾಂತದಲ್ಲಿ ೧೯೭೬ ನೇ ವರ್ಷ ಜುಲೈ ೧೮ ನೇ ದಿನ ಉಂಟಾದ ಭೂಕಂಪಕ್ಕೆ ಎರಡು ಮೂರು ಗಂಟೆಗಳ ಮೊದಲು ಕೋಳಿಗಳು ತಮ್ಮ ಗೂಡಿನೊಳಗೆ ಹೋಗಲು ಒಪ್ಪಲಿಲ್ಲ. ಹುಲಿಗಳು ಸ್ತಿಮಿತವನ್ನು ಕಳೆದುಕೊಂಡುವು. ಕುದುರೆಗಳೂ, ಕುರಿಗಳೂ ಅತ್ತಲೂ ಇತ್ತಲೂ ಓಡಲು ತೊಡಗಿದುವು.

ಯುಗೋಸ್ಲೋವಿಯಾದಲ್ಲಿ ೧೯೬೩ ನೇ ವರ್ಷ ಭೂಕಂಪಕ್ಕೆ ಮೊದಲು ಪ್ರಾಣಿ ಪ್ರದರ್ಶನ ಶಾಲೆಯಲ್ಲಿದ್ದ ಪಕ್ಷಿಗಳೆಲ್ಲಾ ಸುಮ್ಮನೆ ಅರಚ ತೊಡಗಿದುವು. ಉತ್ತರ ಇಟಲಿಯಲ್ಲಿ ೧೯೭೬ ರಲ್ಲಿ ಬಂದ ಭೂಕಂಪಕ್ಕೆ ಎರಡು ಗಂಟೆಗಳ ಮೊದಲು, ಜಿಂಕೆಗಳೆಲ್ಲಾ ಒಂದೇಕಡೆ ಕೂಡಿಕೊಂಡುವು. ಗ್ರಾಮಗಳಿಂದ ಬೆಕ್ಕುಗಳು ಎತ್ತಲೋ ಹೊರಟುಹೋದುವು.

## ನಿಮಗೆ ಗೊತ್ತೇ?

೧. ಕ್ರಿ. ಶ. ಐವತ್ತನೇ ವರ್ಷದಲ್ಲಿ ಕ್ರೈಸ್ತವ ಮತವನ್ನು ಭಾರತ ದೇಶದಲ್ಲಿ ಪ್ರವೇಶಮಾಡಿಸಿದವರು ಯಾರು?

೨. ೨೪ ಮಂದಿ ತೀರ್ಥಂಕರರನ್ನು ತಮ್ಮ ಗುರುಗಳೆಂದು ಭಾವಿಸುವ ಮತವು ಯಾವುದೆಂದು ನಿಮಗೆ ಗೊತ್ತೇ?

೩. ಕ್ರಿ. ಶ. ೪೨೫ ನೇ ಸಂವತ್ಸರದಿಂದ ೧೨೦೫ ರ ವರೆಗೆ ಬೀಹಾರಿನಲ್ಲಿ ಬೆಳಗಿದ ಬೌದ್ಧ ವಿಶ್ವವಿದ್ಯಾಲಯದ ಹೆಸರು ಏನು?

೪. ಪಾರಸೀಕರ ಪವಿತ್ರ ಗ್ರಂಥವು ಯಾವುದು?

೫. ಕ್ರಿ. ಪೂ. ೧ ನೇ ಶತಮಾನದಲ್ಲಿ ರೋಮ್ ನಗರದಲ್ಲಿ ದೊಡ್ಡ ವ್ಯಾಪಾರನಾಗಿ ಹೆಸರಾದವರಾರು?

(ಉತ್ತರ ೬೪ ನೇ ಪುಟದಲ್ಲಿ)



# ನಿಜರಹಸ್ಯ

ಒಂದು ಕಾಲದಲ್ಲಿ ವಿಜಯಪುರ ರಾಜ್ಯವನ್ನು ವೀರಗುಪ್ತನೆಂಬ ರಾಜನು ಪಾಲಿಸಿಕೊಂಡಿದ್ದನು. ಎಲ್ಲಾ ವಿಧದಲ್ಲಿಯೂ ತನ್ನ ಪರಿಪಾಲನೆ ಚೆನ್ನಾಗಿರುವುದೆಂದು ರಾಜನು ನಂಬಿಕೊಂಡಿದ್ದನು. ಆದರೂ ಅಲ್ಲಲ್ಲಿ ಅರಾಜಕತೆಯ ಸಂಭವಗಳು ನಡೆಯುವುದನ್ನು ನೋಡಿ ರಾಜನಿಗೆ ಯೋಚನೆ ಹಿಡಿಯಿತು. ಎಷ್ಟು ಯೋಚಿಸಿದರೂ ಕಾರಣವೇನೂ ಗೊತ್ತಾಗಲಿಲ್ಲ. ಕಡೆಗೆ ಒಂದು ಸಾರಿ ನೆರೆಯ ರಾಜ್ಯವಾದ ಚಂಪಕ ರಾಜ್ಯಕ್ಕೆ ಹೋಗಿ ಅಲ್ಲಿಯ ಪರಿಸ್ಥಿತಿಯನ್ನು ನೋಡಿ ಬರೋಣವೆನಿಸಿತು ವೀರಗುಪ್ತನಿಗೆ. ಏಕೆಂದರೆ ಚಂಪಕ ರಾಜ್ಯದ ಪರಿಪಾಲನೆ ಬಹಳ ಚೆನ್ನಾಗಿದೆಯೆಂದು ಎಲ್ಲರೂ ಹೇಳುತ್ತಿದ್ದರು. ಪ್ರಜೆಗಳು ಪ್ರತಿಯೊಂದಕ್ಕೂ ಚಂಪಕ ರಾಜ್ಯವನ್ನು ಉದಹರಿಸಿ ಮಾತಾಡುವುದೊಂದು ಪದ್ಧತಿಯೇ ಆಗಿ ಹೋಯಿತು. ಅದನ್ನು ನೋಡಿ ರಾಜನಿಂದ ಸುಮ್ಮನಿರಲಾಗಲಿಲ್ಲ.

ನಿಜಕ್ಕೂ ಚಂಪಕದೇಶವು ಅನೇಕ ವರ್ಷಗಳಿಂದ ಸುಭಿಕ್ಷವಾದ ದೇಶ. ಅದಕ್ಕೆ ಕಾರಣನಾದ ಧೀರಸೇನ ರಾಜನು ಬಹಳ ಗಟ್ಟಿಗನೆಂದು ಎಲ್ಲರೂ ಹೇಳುತ್ತಿದ್ದರು. ಅವನು ಯಾವ ರೀತಿ ಪರಿಪಾಲನೆ ನಡೆಸುವನೆನೋ, ಅದರಲ್ಲಿ ಅವನ ಗಟ್ಟಿಗತನವೆಂತಹುದೋ ಎಂಬುದನ್ನು ನೋಡಲು ವೀರಗುಪ್ತನು ಅಲ್ಲಿಗೆ ಹೋಗಿ ಅವನನ್ನು ನೋಡಿದನು.

ಧೀರಸೇನನು ವೀರಗುಪ್ತನನ್ನು ಘನವಾದ ರೀತಿಯಲ್ಲಿ ಸ್ವಾಗತ ಮಾಡಿ, ಅವನು ಬಂದ ಕಾರ್ಯವನ್ನು ತಿಳಿದುಕೊಂಡ ಮೇಲೆ, "ಯಾವ ದೇಶವಾದರೂ ಅದರ ಅಭಿವೃದ್ಧಿಗೆ ಆ ದೇಶದ ಪ್ರಜೆಗಳೇ ಆಧಾರ ರೂಪರಾಗಿರುತ್ತಾರೆ. ನನ್ನ ದೇಶವು ಸುಭಿಕ್ಷವಾಗಿರುವುದೆಂದರೆ ಅದಕ್ಕೆ ಕಾರಣ ನನ್ನ ದೇಶದ ಪ್ರಜೆಗಳೇ. ಆ ಪ್ರಜೆಗಳ ಇಷ್ಟವನ್ನು ನೋಡಿಕೊಂಡೇ ನನ್ನ ಪಾಲನೆಯ ಕ್ರಮ ನಡೆಯುತ್ತದೆ, ಅಷ್ಟೇ " ಎಂದನು.

ಧೀರಸೇನನು ಹೇಳಿದ ಮಾತು ಕೇಳಿ ವೀರಗುಪ್ತನ ಮನಸ್ಸಿಗೆ ಸ್ವಲ್ಪ ತೃಪ್ತಿಯುಂಟಾಯಿತು. ತನ್ನ ದೇಶದಲ್ಲಿ ಅಲ್ಲಲ್ಲಿ ಅರಾಜಕ ಪರಿಸ್ಥಿತಿಗಳಿರುವುದಕ್ಕೆ ಕಾರಣ ತಾನಲ್ಲ, ತನ್ನ ಪ್ರಜೆಗಳೇ ಎಂದಾಯಿತು. ಆದುದರಿಂದ ಚಂಪಕದೇಶದ ಪ್ರಜೆಗಳ ದೊಡ್ಡತನ ಏನೆಂಬುದನ್ನು ನೋಡಬೇಕೆಂದು ಅವನಿಗೆ ತೋರಿತು. ಹಾಗೇ ... ನಾದರೂ ಇದ್ದರೆ ತನ್ನ ಪ್ರಜೆಗಳನ್ನೂ ಹ... ರಾಜನು ...ಳಿದನು.

" ವಸುಂಧರ "



ಲಾಯಿಸಲು ನೋಡಬಹುದು. ತನ್ನ ಅಭಿಲಾಷೆಯನ್ನು ಧೀರಸೇನನೊಂದಿಗೆ ಹೇಳಿದನು.

"ಆದಕ್ಕೇನು, ಹೋಗೋಣ, ನಿಜರೂಪದಲ್ಲಿ ಹೋದರೆ ಪ್ರಜೆಗಳ ನಿಜವಾದ ಗುಟ್ಟು ಗೊತ್ತಾಗಲಾರದು. ಆದುದರಿಂದ ನಾವು ವೇಷ ಬದಲಾಯಿಸಿಕೊಂಡೇ ಪ್ರಜೆಗಳ ನಡುವೆ ತಿರುಗಾಡಿ ಬರೋಣ" ಎಂದನು ಧೀರಸೇನ.

ಹಾಗೆ ವೇಷ ಮರೆಸಿಕೊಂಡೇ ಇಬ್ಬರು ರಾಜರೂ ಚಂಪಕದೇಶದೊಳಗಿನ ಅನೇಕ ಪ್ರಾಂತಗಳಲ್ಲಿ ತಿರುಗಾಡಿದರು. ಪ್ರತಿಯೊಂದು ಕಡೆಯಲ್ಲಿಯೂ ಧೀರಸೇನನಿಗೆ ಬಹು ದೊಡ್ಡ ಗೌರವ ಮರ್ಯಾದೆಗಳು ನಡೆಯುವುದನ್ನು ನೋಡಿ ವೀರಗುಪ್ತನಿಗೆ ಆಶ್ಚರ್ಯವಾಯಿತು.

ವೇಷ ಮರೆಸಿಕೊಂಡಿದ್ದರೂ, ಪ್ರತ್ಯಕ್ಷ ರಾಜನಿಗೆ [illegible]ವ್ವ ಗೌರವವನ್ನೆ ಪ್ರಜೆಗಳು ಅವನಿಗೆ ಕೊಡು[illegible] [illegible]ರಗುಪ್ತನು ಊರೊಳಗಿನ ಒಬ್ಬನನ್ನು ನಿಮಗೆ [illegible]

ನೋಡಿ, "ನಿಮ್ಮ ರಾಜರು ವೇಷ ಬದಲಾಯಿಸಿಕೊಂಡಿರುವಾಗ. ನೀವುಗಳು ಇವರ ಗುರುತನ್ನು ಹೇಗೆ ಹಿಡಿದಿರಿ?" ಎಂದು ಕೇಳಿದನು.

"ಮಹಾರಾಜರ ಮೇಲೆ ನಮ್ಮ ಹೃದಯದಲ್ಲಿ ಎಣೆಯಿಲ್ಲದಷ್ಟು ಭಕ್ತಿಗೌರವ ತುಂಬಿಕೊಂಡಿವೆ. ಆ ಕಾರಣದಿಂದ ಅವರು ಯಾವ ವೇಷದಲ್ಲಿದ್ದರೂ ಅವರ ಚಲನವಲನಗಳಿಂದ ಗುರುತಿಸಿಬಿಡುತ್ತೇವೆ. ಅಷ್ಟರಮಟ್ಟಿಗೆ ಅವರು ನಮ್ಮೊಳಗೆ ತುಂಬಿಕೊಂಡಿದ್ದಾರೆ" ಎಂದು ಅವನು ಉತ್ತರ ಕೊಟ್ಟನು.

ಆ ಮಾತು ಕೇಳಿ ವೀರಗುಪ್ತನು ಮತ್ತಷ್ಟು ಆಶ್ಚರ್ಯಪಟ್ಟನು.

ಈ ಸಂಚಾರದ ಸಮಯದಲ್ಲಿ ಧೀರಸೇನನು ಕೆಲವು ಕಡೆಗಳಲ್ಲಿ ತನಗೆ ಹಿಡಿಸಿದ ವಸ್ತುಗಳನ್ನು ಕೊಂಡುಕೊಳ್ಳಲು ನೋಡಿದನು. ಆದರೆ ವರ್ತಕರು ಅವನಿಂದ ಹಣವನ್ನು ತೆಗೆದುಕೊಳ್ಳದೆ, "ನಮ್ಮ ಮಹಾರಾಜರಿಗೆ ಇವುಗಳನ್ನು ಕಾಣಿಕೆಯಾಗಿ ಕೊಡುತ್ತೇವೆ. ರಾಜನಿಗೂ ಪ್ರಜೆಗಳಿಗೂ ನಡುವೆ ವ್ಯಾಪಾರ ಬುದ್ಧಿ ಇರಬಾರದು. ತಮಗೆ ಇಷ್ಟವಾದುದನ್ನು ತೆಗೆದುಕೊಳ್ಳಿರಿ ಪ್ರಭೂ!" ಎಂದರು.

ಹೀಗೆ ಚಂಪಕ ರಾಜ್ಯದ ಸಂಚಾರ ಮುಗಿದ ಮೇಲೆ ವೀರಗುಪ್ತನು ಧೀರಸೇನನೊಂದಿಗೆ, "ನಿಜವಾಗಿಯೂ ನಿಮ್ಮ ಪ್ರಜೆಗಳು ದೊಡ್ಡ ಬುದ್ಧಿಯವರು. ನನ್ನ ದೇಶದ ಪ್ರಜೆಗಳು ಇವರಿಂದ ಕಲಿತುಕೊಳ್ಳಬೇಕಾದುದು ತುಂಬಾ ಇದೆ. ಅವರೆಲ್ಲಾ ಯಾವ ಕಾಲಕ್ಕೆ ಕಲಿಯುವರೋ?" ಎಂದು ಹೇಳಿ, ಅಲ್ಲಿಂದ ತನ್ನ ದೇಶಕ್ಕೆ ಹಿಂದಿರುಗಿದನು.

ಒಂದು ತಿಂಗಳು ಕಳೆದ ಮೇಲೆ ವೀರಗುಪ್ತನು, ತನ್ನ ಪ್ರಜೆಗಳ ರೀತಿನೀತಿಗಳು ಹೇಗಿರುವುವೆಂದು ತಿಳಿಯಲು ವೇಷ ಮಾರ್ಪಡಿಸಿಕೊಂಡು ದೇಶದೊಳಗೆ ತಿರುಗಾಡಲು ಹೊರಟನು. ಪ್ರಜೆಗಳು ಯಾರೂ ವೀರಗುಪ್ತನ ಗುರುತು ಹಿಡಿಯಲಿಲ್ಲ.



ಒಂದು ಕಡೆಯಲ್ಲಿ ಅವನು ಒಂದು ವಸ್ತುವನ್ನು ಕೊಂಡುಕೊಳ್ಳುವುದಕ್ಕೆ ನೋಡಿದನು. ವ್ಯಾಪಾರಿ ಬಹಳ ಹೆಚ್ಚಿನ ಬೆಲೆ ಹೇಳುವಂತೆ ತೋರಿತು. "ಇದೆಂತಹ ದುಬಾರಿ ಬೆಲೆ! ಈ ದೇಶದ ರಾಜನೇ ಬಂದು ಕೇಳಿದರೆ ಹೀಗೆ ಬೆಲೆ ಹೇಳುವೆಯಾ?" ಎಂದು ಕೇಳಿದನು.

ಅದನ್ನು ಕೇಳಿ ವ್ಯಾಪಾರಿ ನಗುತ್ತ, "ಮಹಾ ರಾಜರು ಬಂದು ಕೇಳಿದರೆ ಇಷ್ಟು ಕಡಿಮೆ ಬೆಲೆ ಹೇಳುವುದಿಲ್ಲ. ಇನ್ನೂ ಹೆಚ್ಚೇ ಹೇಳುತ್ತೇವೆ. ರಾಜನ ಹಾಗೆ ಬೆಲೆ ಕೊಡಲು ಸಾಮಾನ್ಯ ಪ್ರಜೆ ಗಳಿಂದ ಸಾಧ್ಯವೇ? ನಿಮಗೆ ದುಬಾರಿ ಎನಿಸಿದರೆ ಬೇಡ, ಬಿಟ್ಟು ಹೋಗಿರಿ" ಎಂದನು.

ವೀರಗುಪ್ತನಿಗೆ ಏನು ಹೇಳಲೂ ತೋರಲಿಲ್ಲ. ಅಲ್ಲಿಗೆ ಅವನು ದೇಶ ಸಂಚಾರವನ್ನು ಮುಗಿಸಿ, ತನ್ನ ಅರಮನೆಗೆ ಹಿಂದಿರುಗಿದನು. ಅನಂತರ ತನ್ನ ಮಂತ್ರಿಗಳನ್ನೆಲ್ಲ ಸಮಾವೇಶಗೊಳಿಸಿ, ಅವರೊಂದಿಗೆ ತನ್ನ ಅನುಭವಗಳನ್ನೆಲ್ಲ ಹೇಳಿ, "ಇಂತಹ ಕೆಟ್ಟ ಪ್ರಜೆಗಳಿರುವ ದೇಶಕ್ಕೆ ರಾಜನಾಗಬೇಕಾಗಿ ಬಂದುದು ನನ್ನ ದುರದೃಷ್ಟ. ನಮ್ಮ ಪ್ರಜೆಗಳು ಚಂಪಕ ದೇಶದ ಪ್ರಜೆಗಳ ಹಾಗೆ ಬದಲಾವಣೆ ಹೊಂದ ಬೇಕಾದರೆ ಏನು ಮಾಡಬೇಕೆಂದು ನೀವು ಯೋಚಿಸಿ ಹೇಳಬೇಕು. ಚಂಪಕದ ಪ್ರಜೆಗಳು ಸ್ವರ್ಗದಿಂದ ಇಳಿದು ಬಂದವರೇನಲ್ಲವಷ್ಟೆ?" ಎಂದನು.

ಮಂತ್ರಿಗಳು ಸ್ವಲ್ಪ ಹೊತ್ತು ತಮ್ಮೊಳಗೆ ತಾವು ಚರ್ಚೆ ಮಾಡಿಕೊಂಡರು. ಆಮೇಲೆ ರಾಜನನ್ನು ನೋಡಿ, "ಪ್ರಭೂ, ಮಹಾರಾಜರಾದ ನೀವು ನೆರೆಯ ದೇಶಕ್ಕೆ ಸ್ವತಃ ಹೋಗಿ ನೋಡಿ ಬಂದಿದ್ದೀರಿ. ಹಾಗೆಯೇ ನಮ್ಮ ಪ್ರಜೆಗಳಲ್ಲಿ ಕೆಲವರನ್ನು ಆರಿಸಿ ಅಲ್ಲಿಯ ರಾಜನ ಅನುಮತಿಯಿಂದ ಆ ದೇಶಕ್ಕೆ ಕಳುಹಿಸಿ ಅಲ್ಲಿ ಕೆಲವು ದಿನ ಇದ್ದು ಬರಬೇಕೆಂದರೆ ಚೆನ್ನಾಗಿರುತ್ತದೆಂದು ನಮ್ಮ ಅಭಿಪ್ರಾಯ. ಪ್ರಜೆ ಗಳಿಂದಲೇ ಪ್ರಜೆಗಳಿಗೆ ಬುದ್ಧಿ ಹೇಳಿಸುವ ಹಾಗೆ ಮಾಡಲು ಇದು ಒಳ್ಳೆಯ ದಾರಿ" ಎಂದರು.

ಮಂತ್ರಿಗಳ ಸೂಚನೆ ವೀರಗುಪ್ತನಿಗೆ ಹಿಡಿಸಿತು. ಹಾಗೆಯೇ ತನ್ನ ದೇಶದೊಳಗಿನ ಬೇರೆ ಬೇರೆ ಪ್ರಾಂತ ಗಳಿಂದ ನೂರು ಮಂದಿ ಪ್ರತಿನಿಧಿಗಳನ್ನು ಆರಿಸಿ ಚಂಪಕ ದೇಶಕ್ಕೆ ಕಳುಹಿಸಿದನು.

ಅವರು ಚಂಪಕ ದೇಶದ ಪ್ರಜೆಗಳೊಂದಿಗೆ ಎರಡು ತಿಂಗಳು ಇದ್ದು ಬರಬೇಕೆಂದು ರಾಜನ ಅಪ್ಪಣೆಯಾಗಿತ್ತು. ಇದಕ್ಕೆ ಚಂಪಕದ ರಾಜ ಧೀರ ಸೇನನ ಅನುಮತಿ ಕೂಡಾ ಲಭಿಸಿತ್ತು. ಧೀರ ಸೇನನು ತನ್ನ ದೇಶದ ಪ್ರಮುಖರನ್ನು ಆರಿಸಿ ಚಂಪಕ ದೇಶಕ್ಕೆ ತಿರುಗಾಡಿ ಅಲ್ಲಿಯ ಪ್ರಜೆಗಳ ಗುಟ್ಟುಗಳನ್ನು ತಿಳಿದು ಬರಲು ಕಳುಹಿಸಿಕೊಟ್ಟನು.

ಎರಡು ತಿಂಗಳು ಕಳೆದ ಮೇಲೆ ರಾಜನು ಕಳುಹಿ ಸಿದ ಪ್ರತಿನಿಧಿಗಳು ತಿರುಗಿ ಬಂದರು. ರಾಜನು ಅವರ ಅನುಭವಗಳನ್ನು ಕುರಿತು ಕೇಳಿದನು.

"ಮಹಾಪ್ರಭೂ, ಯಾವ ದೇಶವು ಅಭಿವೃದ್ಧಿಗೆ ಏರಬೇಕಾದರೂ ಅದಕ್ಕೆ ಸರಿಯಾದ ನಾಯಕನಿರಬೇಕು. ಚಂಪಕ ದೇಶದ ರಾಜ ಧೀರಸೇನನು ಅಂತಹ ಗುಣವುಳ್ಳ ನಾಯಕನಾಗಿದ್ದಾನೆ. ತುಂಬಾ ಪ್ರಜ್ಞಾವಂತ ರಾಜನವನು. ಅವನು ಅರಮನೆಯಲ್ಲಿ ರಾಜನಾಗಿದ್ದರೂ, ಪ್ರಜೆಗಳ ನಡುವೆ ಪ್ರಜಾನಾಯಕನಾಗಿಯೂ ಇದ್ದಾನೆ" ಎಂದರು ಆ ಪ್ರತಿನಿಧಿಗಳು.

ಈ ಮಾತು ಕೇಳಿ ವೀರಗುಪ್ತನು ಕೋಪದಿಂದ, "ಧೀರಸೇನನೇ ನನ್ನೊಂದಿಗೆ ಹೇಳಿದ್ದಾನೆ, ತನ್ನ ದೇಶದಲ್ಲಿ ' ಅರಾಜಕತೆಯೇನಿಲ್ಲದೆ ಸುಭಿಕ್ಷವಾಗಿದೆ ಎಂದರೆ ಅದಕ್ಕೆ ತನ್ನ ಪ್ರಜೆಗಳೇ ಕಾರಣವಲ್ಲದೆ, ತಾನಲ್ಲವೆಂದು. ನೀವು ಹೇಳುವುದು ವಿಪರೀತವಾಗಿದೆ" ಎಂದನು.

"ಆ ರಾಜನು ಯಾವುದಕ್ಕೂ ತನ್ನನ್ನು ತಾನು ಹೊಗಳಿಕೊಳ್ಳುವುದಿಲ್ಲ. ಪ್ರಜೆಗಳನ್ನು ಹೆತ್ತ ಮಕ್ಕಳ ಹಾಗೆ ಪ್ರೀತಿಸುತ್ತ, ದೊಡ್ಡತನಗಳನ್ನೂ ಆ ಪ್ರಜೆಗಳಿಗೇ ಹೊಂದಿಸಿಬಿಡುತ್ತಾನೆ" ಎಂದರು ಪ್ರತಿನಿಧಿಗಳು.

ವೀರಗುಪ್ತನು ಸ್ವಲ್ಪ ಯೋಚಿಸುತ್ತ ಸುಮ್ಮನಿದ್ದು, "ರಾಜನು ಯಾವ ವೇಷದಲ್ಲಿದ್ದರೂ ಚಂಪಕ ದೇಶದ ಪ್ರಜೆಗಳು ತಮ್ಮ ರಾಜನನ್ನು ಗುರುತಿಸುತ್ತಾರೆ. ಇಲ್ಲಿ ರಾಜನು ನಿಜವೇಷದಲ್ಲಿದ್ದರೂ ಗುರುತು ಹಿಡಿಯಲಾಗದಂಥವರು ನಮ್ಮ ದೇಶದಲ್ಲಿ ಬಹಳ ಮಂದಿ ಇದ್ದಾರೆ. ಇದಕ್ಕೇನು ಹೇಳುವಿರಿ ?" ಎಂದು ಕೇಳಿದನು.

"ಪ್ರಭೂ ! ಗೌತಮ ಬುದ್ಧನ ಬೊಂಬೆ ಎಲ್ಲಿಗೆ ಒಯ್ದರೂ, ಅದು ಎಲ್ಲಿ ಕಣ್ಣಿಗೆ ಬಿದ್ದರೂ ಎಲ್ಲರೂ ಗುರುತಿಸುತ್ತಾರೆ. ಇದಕ್ಕೆ ಕಾರಣ ಬುದ್ಧನ ದೊಡ್ಡತನವೇ ಹೊರತು ಪ್ರಜೆಗಳ ದೊಡ್ಡತನವೇನಲ್ಲ" ಎಂದರು ಪ್ರತಿನಿಧಿಗಳು.

ವೀರಗುಪ್ತನು ಆ ಪ್ರತಿನಿಧಿಗಳನ್ನು ಅವರ ಪಾಡಿಗೆ ಹೋಗಲು ಬಿಟ್ಟನು. ಆಮೇಲೆ ಮಂತ್ರಿಗಳನ್ನು ಕರೆದು, "ಇದರಲ್ಲಿ ತಪ್ಪು ಪೂರಾ ನಮ್ಮದೇ. ನಮ್ಮ ಪ್ರಜೆಗಳಲ್ಲಿ ಕುಂದುಕೊರತೆಗಳಿದ್ದರೆ ಅವುಗಳನ್ನು ಸರಿಪಡಿಸಬೇಕಾದುದು ರಾಜನ ಬಾಧ್ಯತೆ. ಆ ಬಾಧ್ಯತೆಯನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗದೆ ಹೋದರೆ ನಾನು ರಾಜನಾಗಿಯೂ, ನೀವುಗಳು ಮಂತ್ರಿಗಳಾಗಿಯೂ ಇರಲು ತಕ್ಕವರಲ್ಲ" ಎಂದನು.

ಈ ಸತ್ಯವು ರಾಜನಿಗೆ ಗೊತ್ತಾದ ಮೇಲೆ ವೀರಗುಪ್ತನ ಪಾಲನೆಯಲ್ಲಿ ಬದಲಾವಣೆ ಬಂದಿತು. ಬಹುಬೇಗದಲ್ಲೇ ಅವನ ಪ್ರಜೆಗಳು ಕೂಡಾ ಕ್ರಮವಾಗಿ ಚಂಪಕ ದೇಶದ ಪ್ರಜೆಗಳ ಹಾಗೆಯೇ ಮಾರ್ಪಾಟು ಹೊಂದಿದರು.






# ಕುರುಡು ಭಿಕ್ಷುಕ

ಕಥೆಗಳ ಕಡಲನ್ನೇ ಬತ್ತಿಸಿಬಿಡುವೆನೆಂಬ ಪಣ ತೊಟ್ಟವನಂತೆ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಮಾನವನ ಶವವನ್ನು ಕೆಳಗಿಳಿಸಿ, ತನ್ನ ಭುಜಸ್ಕಂಧದ ಮೇಲೆ ಹಾಕಿಕೊಂಡು, ಮೌನವಾಗಿ ಸ್ಮಶಾನದ ಕಡೆಗೆ ನಡೆಯು ತೊಡಗಿದನು.

ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೌ ಮಹಾರಾಜನೇ! ತಲೆಹಾಕಿದ ಕಾರ್ಯವನ್ನು ಮಾಡಿ ಮುಗಿಸಿಯೇ ತೀರುವೆನೆಂಬ ನಿನ್ನ ಹಟವನ್ನು ಮೆಚ್ಚಬಹುದಾದರೂ, ಪ್ರಾಪ್ತಿ ಇಲ್ಲದಿರುವಾಗ ಮಾಡಿದ ಸಾಹಸವೆಲ್ಲವೂ ಕಾಸಿನ ಪ್ರಯೋಜನವಿಲ್ಲದೆ ಹೋಗುವುದೂ ಉಂಟು. ಅಜಾಗ್ರತೆಯಿಂದಲೋ, ಲೋಕಜ್ಞಾನ ಇಲ್ಲದೆ ಹೋದುದರಿಂದಲೋ ಮನುಷ್ಯನು ತನಗೆ ಸಿಕ್ಕಿದವುಗಳನ್ನು ಕೈಯಾರೆ ಜಾರಬಿಡುವುದೂ ಉಂಟು. ಇದಕ್ಕೆ ಉದಾಹರಣೆಯಾಗಿ ಕುರುಡು ಭಿಕ್ಷುಕನ ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳುವಾಗ ನಿನಗೆ ನಡೆಯುವ ಕಷ್ಟ ತಿಳಿಯಲಿಕ್ಕಿಲ್ಲ" ಎಂದು ಕಥೆಯನ್ನು ಪ್ರಾರಂಭಿಸಿತು:

ಬೇತಾಳ ಕಥೆಗಳು



ಹಿಂದೆ ಸಾರಥಿ ಎಂಬೊಬ್ಬ ಅನಾಥ ಹುಡುಗ ನಿದ್ದ. ಅವನ ಹೆತ್ತವರಾರೆಂದು ಅವನಿಗೇ ತಿಳಿಯದ ಪ್ರಾಯದಲ್ಲಿ ತಾತನ ಆಶ್ರಯದಲ್ಲೇ ಅವನಿದ್ದನು. ಆ ಮುದುಕ ತುಂಬಾ ಮುದ್ದು ಮಾಡಿ ಮಾಡಿ ಅವನನ್ನು ಬೆಳೆಸಿದನು. ಆ ಕಾರಣದಿಂದ ಅವನಿಗೆ ಓದುಬರೆಹ ಮೊದಲಾದ ಯಾವ ವಿದ್ಯೆಗಳೂ ಬರಲಿಲ್ಲ. ಊರೊಳಗೆ ಪೋಲಿಪೋಕರಿಗಳಾಗಿ ತಿರುಗುವ ಹುಡುಗರೊಂದಿಗೆ ಆಟವಾಡಿ, ಊಟದ ಹೊತ್ತಿಗೆ ತಾತನ ಬಳಿಗೆ ಬರುತ್ತಿದ್ದ. ಹೀಗೆಯೇ ಅವನಿಗೆ ಎಳೆ ಮೀಸೆ ಮೊಳೆಯುವ ಹದಿನಾರು ವರ್ಷ ಪ್ರಾಯ ತುಂಬಿತು. ಅದುವರೆಗೂ ಯಾವ ಕೆಲಸವೂ ತಿಳಿಯದವನಾಗಿ ಬೆಳೆದುಬಿಟ್ಟಿದ್ದನು. ಅಷ್ಟರಲ್ಲಿ ಅವನ ತಾತ ಫಕ್ಕನೆ ಸತ್ತುಹೋದನು.

ತಾತ ಬದುಕಿರುವವರೆಗೂ ಸಾರಥಿಗೆ ಹೊಟ್ಟೆಯ ಚಿಂತೆ ಇದ್ದಿಲ್ಲ. ತಾತ ಹೋದ ಮೇಲೆ ಮಾತ್ರ ಹಸಿವಾದಾಗ ಏನು ಮಾಡುವುದೆಂಬ ಸಮಸ್ಯೆ ಅವನನ್ನು ಕವಿದುಕೊಂಡಿತು. ಊರೊಳಗೆ ಏನಾದರೂ ನಾಲ್ಕು ಕಾಸು ಸಿಗುವಂತಹ ಕೂಲಿ ಕೆಲಸಗಳಿಗೆ ಕೂಡಾ ಯಾರೂ ಅವನನ್ನು ಕರೆಯುತ್ತಿದ್ದಿಲ್ಲ. ಪರಿಚಯದ ಸ್ಥಳದಲ್ಲಿ ಬೇಡಿ ತಿನ್ನಲು ನಾಚಿಕೆಯಾಗಿ, ಆ ಊರನ್ನು ಬಿಟ್ಟು ಹೊರಟು, ಎರಡು ದಿನಗಳ ಮೇಲೆ ಬೇರೊಂದು ಊರಿಗೆ ಮುಟ್ಟಿದನು.

ಅಲ್ಲಿ ಅವನಿಗೆ ಯಾರೂ ಯಾವ ಕೆಲಸವನ್ನೂ ಕೊಡಲು ಮುಂದೆ ಬರಲಿಲ್ಲ. ದಿನವಿಡೀ ನೀರಿನಿಂದಲೇ ಹೊಟ್ಟೆ ತುಂಬಿಸಿಕೊಂಡು, ರಾತ್ರಿ ಯಾವುದೋ ಒಂದು ಮನೆಯ ಜಗಲಿಯ ಮೇಲೆ ಮಲಗಿ ನಿದ್ದೆಗೆ ಜಾರಿಕೊಂಡನು. ಸುಮಾರು ನಡುರಾತ್ರಿಯ ಹೊತ್ತಿನಲ್ಲಿ ಫಕ್ಕನೆ ಏನೋ ಬಿದ್ದ ಶಬ್ದವಾಗಿ ಎಚ್ಚರಕ್ಕೆ ಬಂದನು. ಪಕ್ಕದಲ್ಲಿ ಯಾರೋ ನೋವಿನಿಂದ ನರಳುವ ಶಬ್ದ ಕೇಳುತ್ತಿತ್ತು. ಅವನು ಗಡಬಡಿಸಿ ಎದ್ದು ಬೀದಿಯ ಬದಿಗೆ ಹೋಗಿ ನೋಡಿದನು. ಒಬ್ಬ ಮನುಷ್ಯನು ಬಿದ್ದು ಮೆಲ್ಲನೆ ಅಲುಗಾಡುತ್ತಿರುವುದನ್ನು ನೋಡಿ, ಅವನ ತೋಳುಗಳನ್ನು ಹಿಡಿದು ಮೆಲ್ಲನೆ ಎಬ್ಬಿಸಿ ಕೂಡಿಸಿದನು. ಅವನೊಬ್ಬ ಕುರುಡ. ಭಿಕ್ಷಾಪಾತ್ರ ಬದಿಯಲ್ಲೇ ಹೊರಳಿತ್ತು.

ಕುರುಡು ಭಿಕ್ಷುಕನು ಸಾರಥಿಯ ಹೆಗಲಿನ ಮೇಲೆ ತನ್ನ ಕೈಯನ್ನು ಹಾಕಿ, "ಅಪ್ಪಾ, ನಾನು ಪಕ್ಕದ ಊರಿನ ಜಾತ್ರೆಯಲ್ಲಿ ಭಿಕ್ಷೆ ಬೇಡಿ ಹಿಂದಿರುಗಿ ಬರುತ್ತಾ ಇದ್ದೇನೆ. ಇಲ್ಲಿ ಯಾವ ಪೋಕರಿಗಳೋ ನಡುಬೀದಿಯಲ್ಲಿ ಕಲ್ಲು ಹಾಕಿಟ್ಟದ್ದು ಕಾಲಿಗೆ ತಾಗಿ ಹೀಗೆ ಬಿದ್ದುಬಿಟ್ಟೆ. ಸೊಂಟದ ಹತ್ತಿರ ಉಳುಕಿ ಹೋದಹಾಗಿದೆ. ಈ ಬೀದಿಯ ಕಡೇ ಭಾಗದಲ್ಲಿ ಒಂದು ಹುಣಸೇ ಮರವಿದೆ. ಅಲ್ಲಿಯವರೆಗೆ ನನಗೆ ಸ್ವಲ್ಪ ಆಧಾರ ಕೊಟ್ಟು ಕರೆದೊಯ್ದುಬಿಟ್ಟರೆ ಸಾಕು. ನಿನ್ನ ಉಪಕಾರ ಮರೆಯಲಾರೆ" ಎಂದನು.

ಸಾರಥಿ ಆ ಕುರುಡು ಭಿಕ್ಷುಕನಿಗೆ ಕೈಯ ಆಧಾರ ಕೊಟ್ಟು, ಅವನು ಹೇಳಿದ ಹುಣಸೇ ಮರದ ಬುಡಕ್ಕೆ

ಕರೆದುಕೊಂಡು ಹೋದನು. ಅಲ್ಲಿ ಭಿಕ್ಷುಕನು, ಸಾರಥಿ ಆ ಊರಿಗೆ ಹೊಸಬನೆಂದು ಅರಿತು, ಅವನ ಸಮಾಚಾರವನ್ನು ವಿಚಾರಿಸಿದನು. ಅವನದೂ ಇನ್ನೊಂದು ಬಗೆಯ ಭಿಕ್ಷುಕ ಪರಿಸ್ಥಿತಿಯೇ ಎಂದು ತಿಳಿದು, "ಅಪ್ಪಾ, ನನಗೆ ನೀನು ದಾರಿ ತೋರಿಸುತ್ತಾ ನನ್ನೊಂದಿಗೇ ಇದ್ದುಬಿಡು. ಸಿಕ್ಕಿದುದರಲ್ಲಿ ಗಂಜಿಯೋ ತಿಳಿಯೋ ಕುಡಿಯೋಣ, ಆಗಬಹುದೆ ?" ಎಂದನು.

ಯಾವ ಕೆಲಸವೂ ದೊರಕದೆ ಹಸಿವೆಯಿಂದ ಭಗಭಗಿಸಿಕೊಂಡಿದ್ದ ಸಾರಥಿಗೆ ಕುರುಡು ಭಿಕ್ಷುಕನ ಮಾತು ದಿವ್ಯ ವರದಂತೆ ತೋರಿತು. ಕೂಡಲೇ ಒಪ್ಪಿದನು. ಅಂದಿನಿಂದ ಮುದುಕ ಭಿಕ್ಷುಕನೊಂದಿಗೆ ಆ ಹುಣಿಸೇಮರದ ನೆರಳೇ ಅವನ ವಾಸಸ್ಥಾನವಾಯಿತು.

ಸಾರಥಿ ಕುರುಡು ಭಿಕ್ಷುಕನನ್ನು ಕರೆದುಕೊಂಡು ಹೋಗಿ, ಗುಡಿಯ ಹತ್ತಿರವೂ, ತುಂಬಾ ಜನರು ತಿರುಗುವ ಇತರ ಸ್ಥಳಗಳಲ್ಲಿಯೂ ಕೂಡಿಸಿ, ತಾನು ಸ್ವಲ್ಪ ದೂರದಲ್ಲಿ ಕುಳಿತುಕೊಳ್ಳುತ್ತಿದ್ದನು. ಸಿಕ್ಕಿದಷ್ಟು ಹಣ ಕಾಸುಗಳಿಂದ ಹೊಟ್ಟೆ ತುಂಬಿಸಿಕೊಂಡು ಇಬ್ಬರೂ ರಾತ್ರಿ ಹುಣಿಸೇ ಮರದ ಬುಡದಲ್ಲಿ ಮಲಗಿ ನಿದ್ದೆ ಮಾಡುವರು.

ಒಂದು ದಿನ ಮಧ್ಯಾಹ್ನ ಬಿಸಿಲಿನ ಹೊತ್ತು, ದೇವಾಲಯದ ಮೆಟ್ಟಿಲಿನ ಹತ್ತಿರ ಕುರುಡು ಭಿಕ್ಷುಕನು ಕುಳಿತುಕೊಂಡಿದ್ದನು. ಬಿಸಿಲಿನ ತಾಪವನ್ನು ತಾಳಲಾಗದೆ ಭಿಕ್ಷುಕನು ಇದಿರಿನಲ್ಲಿ ಭಿಕ್ಷಾಪಾತ್ರೆಯನ್ನಿಟ್ಟು, ಮೆಟ್ಟಲಿಗೆ ಒರಗಿದ ಹಾಗೆ ನಿದ್ದೆಯಲ್ಲಿದ್ದನು. ಆ ಸಮಯದಲ್ಲಿ ಬೆಲೆಬಾಳುವ ದುಸ್ತುಗಳಿಂದೊಪ್ಪುವ ಐವತ್ತು ವರ್ಷ ಪ್ರಾಯದ ದೊಡ್ಡ ಮನುಷ್ಯನೊಬ್ಬನು ಕುರುಡು ಭಿಕ್ಷುಕನ ಹತ್ತಿರ ಬಂದು, ಭಿಕ್ಷಾ ಪಾತ್ರಕ್ಕೆ ಚಿಕ್ಕದೊಂದು ಚೀಲವನ್ನು ಹಾಕಿ ಹೋಗತೊಡಗಿದನು.

ಸ್ವಲ್ಪ ದೂರದಲ್ಲಿ ಕುಳಿತು ನೋಡುತ್ತಾ ಇದ್ದ ಸಾರಥಿಗೆ ತುಂಬಾ ಹಸಿವೆಯಾಗುತ್ತಾ ಇದ್ದಿತು.



ಧನಿಕನು ಏನೋ ದೊಡ್ಡ ವಸ್ತುವನ್ನು ಭಿಕ್ಷಾ ಪಾತ್ರಕ್ಕೆ ಹಾಕಿದ ಹಾಗೆ ಅವನಿಗೆ ಕಂಡಿತು. ಅದರಲ್ಲೇನಾದರೂ ತಿನ್ನುವ ಪದಾರ್ಥವಿರಬಹುದೆಂದು ಕೊಂಡು ಅವನು ಬಂದು ಆ ಚೀಲವನ್ನೆತ್ತಿ ಬಿಚ್ಚಿ ನೋಡಿ ಆಶ್ಚರ್ಯ ಚಕಿತನಾದನು. ಅದರಲ್ಲಿ ಬೆಲೆ ಬಾಳುವ ಬಂಗಾರದ ನಾಣ್ಯಗಳಿದ್ದುವು.

ಧನಿಕನು ಏನೋ ಪರಾಮತಿಯಿಂದ ಈ ಚೀಲವನ್ನು ಹಾಕಿರಬಹುದೆಂದುಕೊಂಡು ಸಾರಥಿ ಬೇಗ ಬೇಗ ಆ ಧನಿಕನ ಸಮೀಪಕ್ಕೆ ಹೋಗಿ, "ಅಯ್ಯಾ, ನಮ್ಮ ಕುರುಡು ತಾತನ ಭಿಕ್ಷಾ ಪಾತ್ರಕ್ಕೆ ನೀವು ತಿಳಿಯದೆ ಈ ಚೀಲ ಹಾಕಿದ ಹಾಗಿದೆ." ಎನ್ನುತ್ತ ಚೀಲವನ್ನು ಅವನ ಕಡೆಗೆ ನೀಡಿದನು.

ಧನಿಕನು ನಗುತ್ತಾ ಸಾರಥಿಯನ್ನು ನೋಡಿ, "ನೀನು ಆ ಮುದಿ ಕುರುಡನ ಮೊಮ್ಮಗನೇನಾ ? ಬಹಳ ಒಳ್ಳೇದೇ ಆಯಿತು. ನನಗೆ ವ್ಯಾಪಾರದಲ್ಲಿ ಅಂದುಕೊಳ್ಳದ ಹಾಗೆ ದೊಡ್ಡ ಲಾಭ ಬಂದುದಕ್ಕೆ,



ಗುಡಿದೇವರಿಗೆ ನಾಲ್ಕು ತೆಂಗಿನಕಾಯಿ ಒಡೆಸಿದ ಮಾತ್ರಕ್ಕೆ ಸಮಾಧಾನವಾಗುವುದಿಲ್ಲ. ಲಾಭದಲ್ಲಿ ಒಂದು ಪಾಲು ತೀರಾ ಬಡವನಿಗೆ ದಾನ ಮಾಡುತ್ತೇನೆ. ಅವನು ಒಳ್ಳೆಯ ಸ್ಥಿತಿಗೆ ಬಂದರೆ ಪುಣ್ಯ ತಾನೇ ?" ಎಂದು ಹೇಳಿ ಹೊರಟುಹೋದನು.

ಆ ಧನದ ಚೀಲದೊಂದಿಗೆ ಕುರುಡನ ಬಳಿಗೆ ಬರುವ ಸಾರಥಿಗೆ ಹಠಾತ್ತಾಗಿ ಒಂದು ಆಲೋಚನೆ ಬಂತು. ಆ ಹಣದಿಂದ ತಾನು ಪಟ್ಟಣಕ್ಕೆ ಹೋಗಿ ಏನೋ ಒಂದು ವ್ಯಾಪಾರ ಶುರು ಮಾಡಬಹುದಷ್ಟೆ? ದಾತನಾದ ಧನಿಕನ ಉದ್ದೇಶ ಕೂಡಾ ಒಬ್ಬ ಬಡವನು ಒಳ್ಳೇ ಸ್ಥಿತಿಗೆ ಬರಬೇಕೆಂಬುದೇ. ಆ ಬಡವನು ತಾನೇ ಏಕೆ ಆಗಬಾರದು ?

ಹೀಗೆಂದುಕೊಂಡು ಸಾರಥಿ ಆ ಊರನ್ನು ಬಿಟ್ಟು ಸೀದಾ ಪಟ್ಟಣಕ್ಕೆ ಹೋದನು. ಅಲ್ಲಿ ದೊಡ್ಡ ರೀತಿಯಲ್ಲಿ ಒಂದು ತರಕಾರಿಗಳ ಅಂಗಡಿಯನ್ನು ಪ್ರಾರಂಭಿಸಿದನು. ನಾಲ್ಕು ವರ್ಷಗಳಲ್ಲಿ ಒಂದು ಲಕ್ಷ ರೂಪಾಯಿ ಲಾಭ ಸಂಪಾದಿಸಿದನು. ಮತ್ತೊಬ್ಬ ವ್ಯಾಪಾರಿಯ ಮಗಳು ಸುಲೋಚನೆ ಎಂಬವಳೊಂದಿಗೆ ಅವನಿಗೆ ಮದುವೆಯೂ ಆಯಿತು.

ಸುಲೋಚನೆ ಒಳ್ಳೆಯ ಬುದ್ಧಿವಂತ ಹುಡುಗಿ. ಗಂಡನಿಗೆ ಅನುಕೂಲವಾದ ಗುಣವತಿ. ತನ್ನ ಗಂಡನು ಯಾವುದೋ ಹಳ್ಳಿಯಿಂದ ಪಟ್ಟಣಕ್ಕೆ ಬಂದವನೆಂದು ಅವಳಿಗೆ ಗೊತ್ತಿತ್ತೇ ಹೊರತು, ಹೆಚ್ಚಿನ ವಿವರಗಳೊಂದೂ ಅವಳಿಗೆ ತಿಳಿಯದು. ಮದುವೆಯಾದ ನಾಲ್ಕು ತಿಂಗಳ ಮೇಲೆ, ಮನೆಮನೆಗೆ ಪಲ್ಯಕಾಯಿ ಮಾರುವ ಬೀದೀ ವ್ಯಾಪಾರಿಯೊಬ್ಬನು ಅವಳೊಂದಿಗೆ, ಸಾರಥಿ ತನ್ನ ಊರಿನವನೇ ಎಂದೂ, ಐದಾರು ವರ್ಷಗಳ ಹಿಂದೆ ಉಟ್ಟ ಬಟ್ಟೆಯೊಂದಿಗೆ ಊರು ಬಿಟ್ಟು ಹೋದವನೆಂದೂ ಹೇಳಿದನು.

ಇದನ್ನು ಕೇಳಿ ಸುಲೋಚನೆಗೆ ಬಹಳ ಆಶ್ಚರ್ಯವಾಯಿತು. ಉಟ್ಟ ಬಟ್ಟೆಯೊಂದಿಗೆ ಊರುಬಿಟ್ಟು ಬಂದ ತನ್ನ ಗಂಡ, ಇಷ್ಟು ಸ್ವಲ್ಪಕಾಲದಲ್ಲಿ ಇಷ್ಟು ದೊಡ್ಡ ಧನಿಕನು ಹೇಗಾದನು ?

ಆ ದಿನ ಸಾಯಂಕಾಲ ಸಾರಥಿ ಮನೆಗೆ ಬಂದ ಕೂಡಲೇ ಅವಳು ತನಗೆ ತಿಳಿದ ಸಂಗತಿಯನ್ನು ಅವನಿಗೆ ಹೇಳಿ, "ನೀವು ಪ್ರಾರಂಭದಲ್ಲಿ ದೊಡ್ಡ ರೀತಿಯಲ್ಲಿ ತರಕಾರಿ ಅಂಗಡಿ ಪ್ರಾರಂಭಿಸಿದಿರೆಂದು ಕೇಳಿದ್ದೇನೆ. ಅದಕ್ಕೆ ಅಗತ್ಯವಾದ ಮೂಲಧನ ನಿಮಗೆ ಹೇಗೆ ಸಿಕ್ಕಿತು ?" ಎಂದು ಕೇಳಿದಳು.

ಸಾರಥಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಯಾವ ವಿಧವಾಗಿ ನೋಡಿದರೂ ತಾನೊಬ್ಬ ಕಳ್ಳನೇ. ಒಬ್ಬ ಮುದುಕ ಕುರುಡನಿಗೆ ಸೇರಬೇಕಾಗಿದ್ದ ಧನವನ್ನು ತಾನು ಅಪಹರಿಸಿದ್ದೇನೆ. ಈ ಸಂಗತಿ ಕೇಳಿದರೆ ಹೆಂಡತಿ ತನ್ನನ್ನು ಹೇಸಿಕೊಳ್ಳಲಾರಳೇ ?

ಗಂಡನ ಮೌನವನ್ನು ನೋಡಿ ಸುಲೋಚನೆಗೆ ಇನ್ನಷ್ಟು ಆಶ್ಚರ್ಯವಾಯಿತು. ಅವಳು ಒಂದಕ್ಕೆ ಎರಡು ಸಾರಿ ಕೇಳಿದ ಮೇಲೆ ಸಾರಥಿ, "ಹೌದೌದು.

ಆ ಮೂಲಧನವು ಪಾಪದ ಧನ. ವಿವರಗಳನ್ನು ಕೇಳಬೇಡ" ಎಂದನು ಸಂಕಟಪಡುತ್ತ.

"ಅದು ಪಾಪದ ಧನವಾಗಿದ್ದರೆ ವ್ಯಾಪಾರದಲ್ಲಿ ನಿಮಗಿಷ್ಟು ಲಾಭವಾಗುತ್ತಿದ್ದಿಲ್ಲ. ಸ್ವಲ್ಪ ನಿಧಾನವಾಗಿ ಆಲೋಚನೆ ಮಾಡಿ ನೋಡಿ" ಎಂದಳು ಸುಲೋಚನೆ.

ಅದನ್ನು ಕೇಳಿ ಸಾರಥಿಗೆ ಇಷ್ಟು ಕಾಲ ತಲೆಯಲ್ಲಿ ಹೊತ್ತುಕೊಂಡಿದ್ದ ಯಾವುದೋ ಕೆಟ್ಟ ಭಾರವನ್ನು ಕೆಳಗಿಳಿಸಿದಷ್ಟು ಹಗುರೆನಿಸಿತು.

ಅವನು ಉತ್ಸಾಹದಿಂದ "ನೀನು ಹೇಳಿದುದು ನಿಜವೇ. ಒಂದು ವೇಳೆ ನಾನು ಮಾಡಿದುದು ಪಾಪವೇ ಆದರೂ ಅದಕ್ಕೆ ಪರಿಹಾರವಿರುತ್ತದೆ. ಆ ಕುರುಡು ತಾತ ಇನ್ನೂ ಬದುಕಿಯೇ ಇರುತ್ತಾನೆ. ಅವನನ್ನು ನಮ್ಮ ಮನೆಗೆ ಕರೆದುಕೊಂಡು ಬಂದು ಸ್ವಂತ ತಾತನ ಹಾಗೆಯೇ ನೋಡಿಕೊಳ್ಳೋಣ" ಎಂದು ನಡೆದ ಸಮಾಚಾರವನ್ನೆಲ್ಲಾ ಹೆಂಡತಿಗೆ ಹೇಳಿದನು.

ಸುಲೋಚನೆ ಸೀರೆಯ ಸೆರಗಿನಿಂದ ಕಣ್ಣನ್ನು ಒತ್ತಿಕೊಂಡು, "ಈ ಕೆಲಸ ನೀವು ಎಂದೋ ಮಾಡಬೇಕಿತ್ತು. ನಾಳೆಯೇ ಹೊರಟುಹೋಗಿ ಕರೆದುಕೊಂಡು ಬನ್ನಿ" ಎಂದಳು.

ಮರುದಿನ ಹೊರಡುವ ಸಮಯಕ್ಕೆ ಆ ಗಂಡ ಹೆಂಡಿರಿಗೆ ಒಂದು ಅನುಮಾನವು ಬಂದಿತು. ಒಂದು ವೇಳೆ ಕುರುಡು ತಾತ ಬರುವುದಿಲ್ಲವೆಂದರೆ ಏನು ಮಾಡಬೇಕು ?

"ಹಾಗೂ ಅವನು ಬರುವುದಿಲ್ಲವೆಂದು ಅಂದು ಬಿಟ್ಟರೆ ಆಮೇಲೆ ನಾನೇ ನಿಮ್ಮೊಂದಿಗೆ ಬರುತ್ತೇನೆ. ಯಾವುದಕ್ಕೂ ನಿಮ್ಮ ಕೈಯಲ್ಲಿ ಸ್ವಲ್ಪ ಹಣವೂ ಹೆಚ್ಚಾಗಿರಲಿ. ಅವನಿಗೆ ಕೊಡಬೇಕಾಗಿ ಬಂದರೆ ಕೊಡಿರಿ" ಎಂದಳು ಸುಲೋಚನೆ.

ಸಾರಥಿ ನಾಲ್ಕು ಸಾವಿರ ರೂಪಾಯಿಯನ್ನು ತೆಗೆದುಕೊಂಡು, ದಾರಿಯಲ್ಲಿ ಎರಡು ನದಿಗಳನ್ನು ದಾಟಿ, ಎರಡನೇ ದಿನ ಸಾಯಂಕಾಲದ ಹೊತ್ತಿಗೆ ಬಾಡಿಗೆಯ ಗಾಡಿಯಲ್ಲಿ ಕುರುಡು ತಾತನಿರುವ





ಊರನ್ನು ತಲುಪಿದನು. ಆದರೆ ಹುಣಿಸೇ ಮರದ ಕೆಳಗೆ ಕುರುಡು ತಾತನಿರುವುದು ಕಾಣಲಿಲ್ಲ.

ಅಲ್ಲಿ ಕಣ್ಣಿಗೆ ಬಿದ್ದವರ ಹತ್ತಿರ ವಿಚಾರಿಸಿದನು. ಆ ಕುರುಡು ಭಿಕ್ಷುಕನು ಒಂದು ವರ್ಷದಿಂದ ಊರಿನ ಕೊನೆಯಲ್ಲಿರುವ ಶಿವಾಲಯದ ಆವರಣದಲ್ಲಿ ಇರುವನೆಂದು ಗೊತ್ತಾಯಿತು. ಸಾರಥಿ ಸೀದಾ ಅಲ್ಲಿಗೆ ಹೋದನು. ಅಷ್ಟು ಹೊತ್ತಿಗೆ ಕತ್ತಲೆಯಾಗುತ್ತಿದ್ದಿತು. ಅಲ್ಲಿ ಧ್ವಜಸ್ತಂಭದ ಹತ್ತಿರ ಚುಟ್ಟ ಸೇದಿಕೊಂಡಿದ್ದ ಒಬ್ಬನನ್ನು ನೋಡಿ, ಕುರುಡು ಭಿಕ್ಷುಕನನ್ನು ಕುರಿತು ಕೇಳಿದನು. ಆ ಮುದಿ ಕುರುಡ ಪೂಜಾರಿಯ ಮನೆಗೆ ಹೋಗಿದ್ದಾನೆಂದೂ, ಸ್ವಲ್ಪ ಹೊತ್ತಿಗೆ ತಿರುಗಿ ಬಂದು ಮಂಟಪದಲ್ಲಿ ಮಲಗಿಕೊಳ್ಳುತ್ತಾನೆಂದೂ ಆ ಚುಟ್ಟದವನು ಹೇಳಿದನು.

ಸಾರಥಿ ಪೂಜಾರಿಯ ಮನೆಗೆ ಹೋಗೋಣವೆಂದುಕೊಂಡನು. ಅಷ್ಟರಲ್ಲಿ ದಿನವಿಡೀ ಆಕಾಶದಲ್ಲಿ ತುಂಬಿಕೊಂಡಿದ್ದ ಮೇಘವು ಥಕ್ಕನೆ ಗುಡುಗತೊಡಗಿ ಮಿಂಚುಗಳೊಂದಿಗೆ ದೊಡ್ಡ ಮಳೆ ಪ್ರಾರಂಭವಾಯಿತು. ಸುತ್ತುಮುತ್ತಲೂ ಕಗ್ಗಾನುಗತ್ತಲೆ. ಸಾರಥಿ ಉಪಾಯವಿಲ್ಲದೆ ಮಂಟಪದೊಳಗೆ ಹೋಗಿ, ಒಂದು ಮೂಲೆಯಲ್ಲಿ ಕುಳಿತುಕೊಂಡನು. ಪ್ರಯಾಣದ ಬಳಲಿಕೆಯಿಂದ ಕೂಡಲೇ ಅವನಿಗೆ ತೂಕಡಿಕೆಯೂ ನಿದ್ದೆಯೂ ಬಂದಿತು.

ಸ್ವಲ್ಪಹೊತ್ತಿನ ಮೇಲೆ ಅವನ ತಲೆಗೊಂದು ಕೋಲಿನ ಪೆಟ್ಟು ಬಿದ್ದುದರಿಂದ, ತಟಕ್ಕನೆ ಎಚ್ಚರವಾಯಿತು. ಧ್ವಜಸ್ತಂಭದ ಹತ್ತಿರವಿದ್ದು ಅವನೊಂದಿಗೆ ಮಾತಾಡಿದವನು, ಸಾರಥಿಯ ಬಟ್ಟೆಯೊಳಗೆ ಅಡಗಿಸಿಕೊಂಡಿದ್ದ ನಾಲ್ಕು ಸಾವಿರ ರೂಪಾಯಿಗಳ ಗಂಟನ್ನು ತೆಗೆದುಕೊಂಡು ಓಡಿಹೋಗಿಬಿಟ್ಟನು. ತಲೆಗೆ ತಾಗಿದ ಪೆಟ್ಟಿನಿಂದ ಸ್ಮೃತಿ ತಪ್ಪಿದಂತಾದ ಸಾರಥಿ ಅವನನ್ನು ಅಟ್ಟಿಸಿಕೊಂಡು ಹೋಗಲಾಗದೆ ಹೋಯಿತು.

ಬೆಳಗಾಗುತ್ತ ಬರುವಾಗ ಸಾರಥಿಗೆ ಸ್ಮೃತಿ ಬಂದಿತು. ಮುದುಕ ಕುರುಡು ಭಿಕ್ಷುಕ ಪಕ್ಕದಲ್ಲಿ ಕುಳಿತುಕೊಂಡಿದ್ದನು. ಇನ್ನೂ ನಾಲ್ಕೈದು ಮಂದಿಗಳೂ ಅಲ್ಲಿ ಸೇರಿಕೊಂಡಿದ್ದರು.

"ತಾತಾ, ನಿನಗಾಗಿಯೇ ನಾನು ಬಂದಿದ್ದೇನೆ! ನಾನು ಯಾರೆಂದು ಗೊತ್ತಾಯಿತೇ ತಾತಾ?" ಎಂದನು ಸಾರಥಿ, ತನ್ನ ತಲೆಯ ಗಾಯವನ್ನು ಮುಟ್ಟಿ ನೋಡಿಕೊಳ್ಳುತ್ತ.

"ಯಾರು, ಸಾರಥಿಯಾ?" ಎಂದು ಕುರುಡು ತಾತ ಆಶ್ಚರ್ಯಪಟ್ಟು, "ಅಪ್ಪಾ, ಈಗ ಎಲ್ಲಿರುವುದು ನೀನು? ಏನು ಮಾಡುತ್ತೀ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ಸುತ್ತಲೂ ಸೇರಿದವರು ಇವನು ಯಾವನೋ ಕುರುಡು ಭಿಕ್ಷುಕನ ಬಂಧುವಾಗಿರಬೇಕೆಂದುಕೊಂಡು, ತಮ್ಮ ಪಾಡಿಗೆ ಹೊರಟು ಹೋದರು.

ಸಾರಥಿ ಭಿಕ್ಷುಕ ತಾತನೊಂದಿಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿ, "ತಾತಾ, ನನ್ನನ್ನು ಸ್ವಾರ್ಥದವನೆಂದೂ, ಕಳ್ಳನೆಂದೂ ಹೀಯಾಳಿಸಬೇಡ. ನನ್ನ ಹೆಂಡತಿ ಕೂಡಾ ನಿನ್ನನ್ನು ಕರೆದುಕೊಂಡು ಬರಲಿಕ್ಕೆ ಹೇಳಿದ್ದಾಳೆ. ಈ ಮುದಿ ಪ್ರಾಯದಲ್ಲಿ ನಮ್ಮ ಮನೆಯಲ್ಲಿ ನಿನಗೆ ಕಷ್ಟವಿಲ್ಲದೆ ನೆಮ್ಮದಿಯಾಗಿ ಇರಬಹುದು" ಎಂದು ಹೇಳಿ, ಸ್ವಲ್ಪ ತಡೆದು, "ಆ ಕಳ್ಳ ಯಾವನೋ? ನಾನು ನಿನಗಾಗಿ ತಂದ ಹಣವನ್ನು ಕಿತ್ತುಕೊಂಡು ಹೋಗಿಬಿಟ್ಟ. ಈಗ ನಾನು ಹಿಂದಿರುಗಿ ಹೋಗಲಿಕ್ಕೆ ಕೂಡಾ ಏನೂ ಇಲ್ಲದಂತೆ ಮಾಡಿಬಿಟ್ಟ!" ಎಂದನು.

ಕುರುಡು ತಾತ ಸಾರಥಿಯ ತಲೆಯನ್ನು ತಡವುತ್ತ, "ನಿನ್ನ ಪುಣ್ಯ ಅಂದುಕೋ! ಆ ಕಳ್ಳ ನಿನ್ನ ತಲೆ ಒಡೆಯುವಷ್ಟು ಬಲವಾಗಿ ಹೊಡೆಯಲಿಲ್ಲ! ಗುಳ್ಳೆ ಬಂದಿದೆಯೇ ಹೊರತು ರಕ್ತ ಹೊರಗೆ ಬರಲಿಲ್ಲ. ಒಂದು ಮಾತು ಗೊತ್ತಾ? ಮನುಷ್ಯನಿಗೆ ಹಣೆಯಲ್ಲಿ ಬರೆಯದಿರುವಂಥಾದ್ದು ಮಾತ್ರ ಎಷ್ಟು ಪ್ರಯತ್ನಪಟ್ಟರೂ ಪ್ರಾಪ್ತಿಯಾಗದು. ಆದ್ದರಿಂದಲೇ ನಿನಗೆ ಪ್ರಾಪ್ತಿ ಇದ್ದದ್ದು ನಿನಗೆ ಸಿಕ್ಕಿ, ನೀನು ಈ ಸ್ಥಿತಿಗೆ ಬಂದಿರುವಿ. ನೀನು ನನಗಾಗಿ ತಂದ ಹಣ ನನಗೆ ಪ್ರಾಪ್ತಿ ಇಲ್ಲ. ಆದ್ದರಿಂದಲೇ ಅದು ಮತ್ತೊಬ್ಬನ ವಶಕ್ಕೆ ಹೋಯಿತು. ಸರಿ, ನಾನು ನಿನ್ನೊಂದಿಗೆ ಬರುವುದಿಲ್ಲ ಅಂದುದಕ್ಕೆ ತಪ್ಪಾಗಿ ತಿಳಿಯಬೇಡ. ಉಳಿದಿರುವ ನನ್ನ ಸ್ವಲ್ಪ ಕಾಲವನ್ನು ಇಲ್ಲಿಯೇ ಕಳೆದುಬಿಡುತ್ತೇನೆ" ಎಂದನು.

ಸಾರಥಿ ತುಂಬಾ ದಿಗಿಲು ಪಡೆದವನಂತೆ, "ಈ ಸಂಗತಿ ನನ್ನ ಹೆಂಡತಿಗೆ ಹೇಳಿದರೆ ಅವಳೇ ಸ್ವತಃ ನಿನ್ನನ್ನು ಕರೆಯಲು ಬರುತ್ತಾಳೆ. ನನ್ನೊಂದಿಗೆ ಬಂದುಬಿಡು ತಾತಾ" ಎಂದನು.

ಮುದುಕನು ಸ್ವಲ್ಪ ಹೊತ್ತು ಯೋಚಿಸುತ್ತಾ ಸುಮ್ಮನಿದ್ದು. "ಹಾಗಾದರೆ ಒಂದು ಕೆಲಸ ಮಾಡು. ನೀನು ತಂದ ಹಣವನ್ನೆಲ್ಲಾ ನಾನು ತೆಗೆದುಕೊಂಡದ್ದರ ಮೇಲೆ, ಈ ಮೊದಲು ನಡೆದ ಸಂಗತಿಗೆ ನಿನ್ನನ್ನು ಕಳ್ಳನೆಂದು ನಾನಾ ದುರ್ಭಾಷೆಗಳನ್ನು ಹೇಳಿ ಬೈದೆನೆಂದು ನಿನ್ನ ಹೆಂಡತಿಯೊಂದಿಗೆ ಹೇಳು. ಆಗ ನಿನ್ನ ಹೆಂಡತಿಗೆ ನನ್ನ ಮೇಲೆ ಅಸಹ್ಯ ಹುಟ್ಟುತ್ತದೆ. ಇದು ನೀನು ನನಗೆ ಮಾಡಬೇಕಾದ ಒಂದೇ ಒಂದು ಉಪಕಾರ" ಎಂದನು.



ಈ ಮಾತುಗಳನ್ನು ಕೇಳಿದ ಮೇಲೆ ಕುರುಡು ತಾತನು ತನ್ನೊಂದಿಗೆ ಎಷ್ಟು ಮಾತ್ರಕ್ಕೂ ಬರಲಾರನೆಂದೂ, ಇನ್ನು ಕೇಳಿಕೊಂಡು ಪ್ರಯೋಜನವಿಲ್ಲವೆಂದೂ ಸಾರಥಿಗೆ ಗೊತ್ತಾಯಿತು. ಮನಸ್ಸಿನಲ್ಲಿ ಬಹಳವಾಗಿ ತೊಳಲಾಡಿಕೊಂಡನು.

ಸಾರಥಿ ಕುರುಡು ತಾತನ ಎರಡು ಕೈಗಳನ್ನೂ ಹಿಡಿದುಕೊಂಡು, "ಇನ್ನೇನು ಮಾಡಲಿ? ನಿನ್ನ ಇಷ್ಟ ತಾತಾ. ಇರುವುದರಲ್ಲಿ ಆರೋಗ್ಯ ಚೆನ್ನಾಗಿ ನೋಡಿಕೋ. ಇನ್ನೊಮ್ಮೆ ಬರುತ್ತೇನೆ ತಾತಾ" ಎಂದು ಹೇಳಿ ಹೊರಟನು.

ಅವನು ನಾಲ್ಕಡಿ ನಡೆದನೋ ಇಲ್ಲವೋ, ಕುರುಡು ತಾತ ಅವನನ್ನು ಕರೆದು, "ನಿನ್ನ ಹತ್ತಿರವಿದ್ದ ಹಣವೆಲ್ಲಾ ಕಳ್ಳ ಸೆಳೆದುಕೊಂಡು ಹೋದನಷ್ಟೆ? ಪ್ರಯಾಣದ ಖರ್ಚಿಗೆ ಏನು ಮಾಡುತ್ತಿ? ಅಲ್ಲೀ ಇಲ್ಲೀ ಯಾಚಿಸಲು ಹೋಗಬೇಡ, ಇದನ್ನು ನಿನ್ನ ಹತ್ತಿರ ಇಟ್ಟುಕೋ" ಎಂದು ಚಿಕ್ಕದೊಂದು ಚೀಲವನ್ನು ಅವನ ಕೈಗೆ ಕೊಟ್ಟನು.

ಆ ಚೀಲದಲ್ಲಿ ಹತ್ತು ರೂಪಾಯಿಗಳೂ ಸ್ವಲ್ಪ ಚಿಲ್ಲರೆಗಳೂ ಇದ್ದುವು. ಸಾರಥಿಯ ಕಣ್ಣುಗಳಲ್ಲಿ ನೀರು ತುಂಬಿತು. ತಾನು ಲಕ್ಷಾಧಿಕಾರಿಯಾದರೂ ಪರಿಸ್ಥಿತಿಯ ವಿಕೋಪದಿಂದ ಒಬ್ಬ ಕುರುಡ ಭಿಕ್ಷುಕನಿಂದ ದಾನ ಪಡೆಯಬೇಕಾಗಿ ಬಂತು. ಅವನು ತಾತನಿಗೆ ಮನಸ್ಸಿನಲ್ಲೇ ಕೃತಜ್ಞತೆ ಹೇಳಿಕೊಂಡು ಅಲ್ಲಿಂದ ಹೊರಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ "ರಾಜಾ, ಸಾರಥಿ ಕೇಳಿಕೊಂಡಂತೆ ಕುರುಡು ಭಿಕ್ಷುಕನು ಅವನೊಂದಿಗೆ ಹೊರಟಿದ್ದರೆ ಮುದಿಪ್ರಾಯದಲ್ಲಿ ಯಾವ ಕಷ್ಟವೂ ಇಲ್ಲದೆ ದಿನಗಳು ಕಳೆಯುತ್ತಿದ್ದುವು. ಆ ಸೌಲಭ್ಯವನ್ನು ಮುದುಕನು ನಿರಾಕರಿಸಿದ್ದಾನೆ. ಅದಕ್ಕೆ ಕಾರಣ ಅವನಿಗೆ ಸುಖಪಡುವ ಅದೃಷ್ಟವಿಲ್ಲದುದರಿಂದಲೋ ಅಥವಾ ಬೇರೆ ಕಾರಣವೇನಾದರೂ ಇದೆಯೋ? ಈ ಸಂಶಯಕ್ಕೆ ಸರಿಯಾದ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಹಾರುತ್ತದೆ!" ಎಂದು ಎಚ್ಚರಿಸಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಎಲೋ ಬೇತಾಳ ಕಥಾ ಭಂಡಾರಿಯೇ! ಈ ಕಥೆಯ ನಿನ್ನ ಪ್ರಶ್ನೆಯಲ್ಲಿ ಅದೃಷ್ಟದ ಸಮಸ್ಯೆ ಯಾವುದೂ ಇಲ್ಲ. ಕುರುಡ ಭಿಕ್ಷುಕನು ಸಾರಥಿಯನ್ನು ನಂಬಿಸಲು ಪ್ರಾಪ್ತಿ, ಅದೃಷ್ಟ, ಹಣೆಬರಹ ಎಂದೆಲ್ಲಾ ಹೇಳಿದ್ದಾನೆ. ನಿಜಕ್ಕೂ ಆ ಕುರುಡನ ಮನಸ್ಸಿನಲ್ಲಿ ಇದ್ದುದು, ತಾನು ಹುಟ್ಟು ಕುರುಡನಾಗಿ ದುರದೃಷ್ಟವಂತನೆಂಬ ಗಟ್ಟಿ ನಂಬುಗೆ. ಆದುದರಿಂದ ತನಗೆ ದಕ್ಕಬೇಕಾದ ಹಣದೊಂದಿಗೆ ಸಾರಥಿ ದೂರಹೋಗಿ ಧನವಂತನಾಗಿ ಸುಖಪಡುವುದನ್ನು ಅವನು ಒಪ್ಪಿದ್ದಾನೆ. ಸಾರಥಿ ತನಗೆ ಕೊಡಬೇಕೆಂದು ತಂದ ಹಣವನ್ನು ಕಳ್ಳನು ಎತ್ತಿಕೊಂಡು ಓಡಿದ್ದಾನೆ. ಈ ಕಾರಣಗಳಿಂದ ತಾನು ಸಾರಥಿಯ ಮನೆಗೆ ಹೋದರೆ ತನ್ನ ದುರದೃಷ್ಟವನ್ನು ಅವನಿಗೆ ಹಂಚಿದ ಹಾಗೆಯೇ ಆಗುತ್ತದೆ, ಹೀಗೆ ಆಲೋಚಿಸಿಯೇ ಅವನು ಸಾರಥಿಯ ಕೇಳಿಕೆಯನ್ನು ನಿರಾಕರಿಸಿದ್ದು."

ಹೀಗೆ ರಾಜನ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ, ಮತ್ತೆ ಮರದ ಕೊಂಬೆಯನ್ನು ಸೇರಿ ನೇತಾಡತೊಡಗಿತು.





# ಅಂಜುಕುಳಿ

ಬಹಳ ಕಾಲದ ಹಿಂದೆ ಮಾಳವ ರಾಜ್ಯದಲ್ಲಿ ಒಬ್ಬ ಜಮೀನುದಾರನ ಊರಿನಲ್ಲಿ ಗೋಪಾಲನೆಂಬೊಬ್ಬ ಯುವಕನಿದ್ದನು. ಅವನು ಚಿಕ್ಕವನಾಗಿರುವಾಗಲೇ ಅವನ ತಂದೆಯೂ, ಮತ್ತೊಂದು ವರ್ಷದ ಮೇಲೆ ತಾಯಿಯೂ ತೀರಿಹೋದರು. ಅವನ ಅಜ್ಜಿಯೇ ಅವನನ್ನು ಬಹು ಎಚ್ಚರದಿಂದ ಬೆಳೆಸಿ ದೊಡ್ಡವನಾಗುವಂತೆ ಮಾಡಿದಳು. ಬೆಳೆಯುತ್ತ ಬಂದಂತೆ ಅವನು ದೊಡ್ಡ ಅಂಜುಕುಳಿಯಾಗಿ ತಯಾರಾದನು. ಅಜ್ಜಿ ಅವನು ಏನು ಮಾಡಿದರೂ ಹೆದರಿಸುತ್ತ ಬಂದುದರಿಂದ, ತನ್ನ ನೆರಳು ನೋಡಿದರೂ ಹೆದರುವಂತೆ ಆಗಿಬಿಟ್ಟನು.

ಒಂದು ದಿನ ರಾತ್ರಿಯ ಹೊತ್ತಿನಲ್ಲಿ ಒಬ್ಬ ಸನ್ಯಾಸಿ ಆ ಮನೆಗೆ ಬಂದು ರಾತ್ರಿಯನ್ನು ಕಳೆಯಲು ಎಡೆಮಾಡಿ ಕೊಡುವಂತೆ ಕೇಳಿದನು. ಅಜ್ಜಿ ಅವನಿಗಿಷ್ಟು ಊಟ ಹಾಕಿ ಜಾಗ ಕೊಡಲು ಒಪ್ಪಿದಳು. ನಿಜಕ್ಕೂ ಆವಳಿಗೆ ಸನ್ಯಾಸಿ ಬೈರಾಗಿಗಳೆಂದರೆ ಗೌರವವೂ ಭಕ್ತಿಯೂ ಇದ್ದಿತು. ಅವಳು ಸನ್ಯಾಸಿಗೆ ಎಲೆ ಹಾಕಿ ಬಡಿಸಿದಳು. ಅವನು ಊಟ ಮಾಡುವುದನ್ನು ನೋಡುತ್ತಾ, ಸ್ವಲ್ಪದೂರದಲ್ಲಿ ಗೋಪಾಲನು ಕುಳಿತಿದ್ದನು. ಆ ಸಮಯದಲ್ಲಿ ಒಂದು ಇಲಿ ಅಡಿಗೇಕೋಣೆಯೊಳಗಿನಿಂದ ಹಾರುತ್ತಾ ಹೊರಗೆ ಬಂದಿತು. ಗೋಪಾಲನ ಪಕ್ಕದಲ್ಲಿ ಕುಳಿತಿದ್ದ ಬೆಕ್ಕು ಆ ಇಲಿಯನ್ನು ನೋಡಿದ ಕೂಡಲೇ ಮಿಯಾಂವ್ ಎಂದು ಅರಚಿ ಬೀದಿಯ ಕಡೆಗೆ ಓಡಿಹೋಯಿತು.

ಅದನ್ನು ನೋಡಿ ಸನ್ಯಾಸಿಗೆ ಬಹಳ ಆಶ್ಚರ್ಯವಾಯಿತು. ಅವನು ಅಜ್ಜಿಯ ಹತ್ತಿರ ಏನೋ ಹೇಳಬೇಕೆಂದಿರುವಾಗ, ಅಜ್ಜಿ ಗೋಪಾಲನನ್ನು ಮುಖ ಸಿಂಡರಿಸಿ ನೋಡುತ್ತ, "ಏನಪ್ಪಾ ನೀನು! ಮನೇಲಿ ಇಲಿಕಾಟ ಹೆಚ್ಚಾಯಿತು ಅಂತ ಹೇಳಿ ನೀನೇ ಈ ಬೆಕ್ಕನ್ನು ತಂದೆ. ಒಳ್ಳೇದಾಯಿತು ಅಂದುಕೊಂಡರೆ, ಇಲಿಗಳನ್ನು ನೋಡಿದ ಕೂಡಲೇ ಹಾರಿ ಕೊಲ್ಲುವುದನ್ನು ಬಿಟ್ಟು, ಹೆದರಿ ಓಡುತ್ತದೆ ಬೆಕ್ಕು. ನಿನ್ನ ಕೈ ತಾಗಿದ ಕೂಡಲೇ ಯಾವ ಪ್ರಾಣಿಯಾದರೂ ಪುಕ್ಕಲಾಗುತ್ತೆ!" ಎಂದಳು.

ಸನ್ಯಾಸಿಗೆ ಏನೋ ಗುಟ್ಟು ತಿಳಿದಂತಾಯಿತು. ಅವನು ಊಟವಾದ ಮೇಲೆ ಗೋಪಾಲನನ್ನು ಹತ್ತಿರ ಕರೆದು, ಅವನ ಮುಖವನ್ನೂ, ಕೈಗಳನ್ನೂ ಪರೀಕ್ಷಿಸಿ ನೋಡಿ, ಏನೇನೋ ಲೆಕ್ಕಗಳನ್ನು ಗುಣಿಸಿ

ಎಸ್. ಎನ್. ಈಶ್ವರರಾವ್



ಮುಗುಳುನಗು ತೋರಿಸಿ ಸುಮ್ಮನಾದನು. ಮರುದಿನ ಬೆಳಗಾದ ಮೇಲೆ ಅವನು ಹೊರಟು ಹೋಗುವ ಮೊದಲು, ಗೋಪಾಲನ ಅಜ್ಜಿಯನ್ನು ಒಂದು ಬದಿಗೆ ಕರೆದು, "ಅಮ್ಮಾ, ನಿನ್ನ ಮೊಮ್ಮಗನದು ಬಹಳ ವಿಚಿತ್ರವಾದ ಜಾತಕ. ಅವನನ್ನು ಪುಕ್ಕನೆಂದೂ, ಅಂಜುಕುಳಿಯೆಂದೂ, ಹೇಡಿಯೆಂದೂ ಮಾತುಮಾತಿಗೂ ಬೈಯಬೇಡ" ಎಂದನು.

"ಅಯ್ಯಾ, ನನ್ನನ್ನು ಮತ್ತೇನು ಮಾಡಲು ಹೇಳುವಿರಿ ? ಅವನ ಪುಕ್ಕಲುತನ ಹೋಗುವ ಹಾಗೆ, ಒಳ್ಳೇ ಔಷಧವಿದ್ದರೆ ಕೊಡಿರಯ್ಯಾ" ಎಂದು ದೀನಳಾಗಿ ಕೇಳಿಕೊಂಡಳು ಅಜ್ಜಿ.

ಸನ್ಯಾಸಿ ತಲೆದೂಗುತ್ತ "ಅವನ ಅಂಜುಬುರುಕತನವು ಮದ್ದು ಮಾತ್ರೆಗಳಿಂದ ಗುಣವಾಗುವಂತಹುದಲ್ಲಮ್ಮ. ಹೇಳಿದೆನಷ್ಟೇ ಅವನದು ವಿಚಿತ್ರ ಜಾತಕವೆಂದು ? ಅವನು ಪರಿಸ್ಥಿತಿಯ ಪ್ರಭಾವದಿಂದ ಎಂದೋ ಒಂದು ದಿನ, ತನಗೆ ಗೊತ್ತಾಗದ ಹಾಗೆ ಹತ್ತು ಮಂದಿಗೆ ಒಳ್ಳೆಯದಾಗುವ ಘನಕಾರ್ಯ ಮಾಡುತ್ತಾನೆ. ಅಲ್ಲಿಗೆ ಅವನನ್ನು ಹಿಡಿದ ಅಂಜುಕುಳಿ ಪಿಶಾಚಿ ಬಿಟ್ಟುಹೋಗುತ್ತದೆ" ಎಂದು ಹೇಳಿ, ತನ್ನ ದಾರಿ ಹಿಡಿದು ಹೊರಟುಹೋದನು ಸನ್ಯಾಸಿ.

ಮುಂದೆ ಕೆಲವು ದಿನಗಳ ಮೇಲೆ ಒಂದು ದಿನ ಗೋಪಾಲನು ಜಮೀನುದಾರರ ಭವನದ ಕಡೆಗೆ ಹೋಗಿದ್ದನು. ಅವನಿಗೆ ಅಲ್ಲಿ ಜಮೀನುದಾರರ ಪ್ರೀತಿಯ ಸಾಕುನಾಯಿ ಕಂಡಿತು. ಮುದ್ದಾದ ಆ ನಾಯಿಯನ್ನು ನೋಡಿ ಗೋಪಾಲನು ಪ್ರೀತಿಯಿಂದ ಮುಟ್ಟಿ ತಡವಿದನು. ಅದನ್ನು ನೋಡಿ ಜಮೀನುದಾರರಿಗೆ ಸಿಟ್ಟು ಬಂತು. ಹೀಗೆಲ್ಲಾ ಅಚ್ಚೆ ಮಾಡಿದರೆ ನಾಯಿಯ ರೋಷತನ ಹೋಗುತ್ತದೆಂದು ಅವರ ಅಭಿಪ್ರಾಯ. ಗೋಪಾಲನನ್ನು ನಾಲ್ಕು ಬೈದು ಕಳುಹಿಸಿಬಿಟ್ಟರು.

ಆ ದಿನ ರಾತ್ರಿ ಜಮೀನುದಾರರ ಮನೆಗೆ ಅನಾಯಾಸವಾಗಿ ಕಳ್ಳರು ನುಗ್ಗಿದರು. ಅವರನ್ನು ನೋಡಿ ಬೊಗಳಿ ಗಲಾಟೆ ಎಬ್ಬಿಸಬೇಕಾಗಿದ್ದ ನಾಯಿ ಕಳ್ಳರನ್ನು ನೋಡಿ ಹೆದರಿ ದೂರ ಓಡಿಹೋಗಿ ಹುದುಗಿತ್ತು. ಅಂಜುಕುಳಿ ಗೋಪಾಲ ತನ್ನ ನಾಯಿಗೆ ಏನೋ ಹೇಡಿಮದ್ದು ಹಾಕಿದುದರಿಂದಲೇ ಅದು ಕಳ್ಳರನ್ನು ನೋಡಿ ಹೆದರಿಹೋಯಿತೆಂದು ಜಮೀನುದಾರರಿಗೆ ಅನುಮಾನವಾಯಿತು.

ಜಮೀನುದಾರರು ಸುಮ್ಮನೆ ಬಿಡದೆ ತನ್ನ ಮನೆಯ ಕಳ್ಳತನಕ್ಕೆ ಗೋಪಾಲನೇ ಕಾರಣವೆಂದು ತಪ್ಪುಹಾಕಿ ಅವನನ್ನು ನ್ಯಾಯಾಧಿಕಾರಿಯ ಬಳಿಗೆ ಕರೆದುಕೊಂಡು ಹೋದರು. ಜಮೀನುದಾರರು ಹೇಳಿದುದನ್ನೆಲ್ಲಾ ಕೇಳಿ ನ್ಯಾಯಾಧಿಕಾರಿ, ಗೋಪಾಲನ ಕೈಗೆ ರಾಮಾಯಣ ಗ್ರಂಥವನ್ನು ಕೊಟ್ಟು, ಸತ್ಯವನ್ನೇ ಹೇಳುವೆನೆಂದು ಪ್ರಮಾಣ ಮಾಡಲು ಹೇಳಿದನು. ಗೋಪಾಲನು ಹಾಗೆಯೇ ಪ್ರಮಾಣ ಮಾಡಿ ಆ ಗ್ರಂಥವನ್ನು ನ್ಯಾಯಾಧಿಕಾರಿಯ ಕೈಗೆ ಹಿಂದಿರುಗಿ ಕೊಡುವ ಸಮಯದಲ್ಲಿ ಅವನ ಕೈ ನ್ಯಾಯಾಧಿ

ಕಾರಿಯ ಕೈಗೆ ತಗಲಿತು. ಅಷ್ಟೇ, ನ್ಯಾಯಾಧಿಕಾರಿಯ ಶರೀರದೊಳಗೆ ಏನೋ ಭೀತಿ ಪ್ರವೇಶಮಾಡಿತು.

ಈ ನ್ಯಾಯಾಧಿಕಾರಿ ಎಂತಹ ದುಷ್ಟರನ್ನಾದರೂ, ಎಂತಹ ಕ್ರೂರರನ್ನಾದರೂ ಏನೂ ಹೆದರದೆ ಶಿಕ್ಷಿಸುವವನೆಂದು ಪ್ರತೀತಿ ಇದ್ದಿತು. ಅಂತಹವನು ಅಂಜುಕುಳಿ ಗೋಪಾಲನ ಕೈ ತಗಲಿದ ಕೂಡಲೇ ಏನೋ ಗಾಬರಿಬಿದ್ದವನಾಗಿ "ಈ ವಿಷಯದಲ್ಲಿ ವಾದಿ ಪ್ರತಿವಾದಿಗಳಲ್ಲಿ ಯಾರಿಗೆ ಅನುಕೂಲವಾಗಿ ತೀರ್ಪು ಹೇಳಿದರೂ ಎರಡನೆಯವರಿಗೆ ನನ್ನ ಮೇಲೆ ಕೋಪ ಬರುವುದು ಸಹಜ. ಆ ಕೋಪದಲ್ಲಿ ಅವರು ನನಗೇನಾದರೂ ಹಾನಿ ಮಾಡಲೂ ಬಹುದು. ಆದ್ದರಿಂದ ನಾನು ಈ ವ್ಯಾಜ್ಯದಲ್ಲಿ ಯಾರಿಗೂ ಏನೂ ಹೇಳುವಂತಿಲ್ಲ. ನೀವೇ ಏನಾದರೂ ಮಾಡಿಕೊಳ್ಳಿರಿ" ಎಂದು ಹೇಳಿ ಹೋಗಿಬಿಟ್ಟನು.

ಇದನ್ನು ನೋಡಿ ಜಮೀನುದಾರರಿಗೆ ಬಹಳ ಆಶ್ಚರ್ಯವಾಯಿತು. ಅವರು ಗೋಪಾಲನನ್ನು ಕುರಿತು ಒಂದೊಂದೇ ವಿಚಾರಿಸಿದಂತೆ ಅನೇಕ ವಿಚಿತ್ರ ವಿಷಯಗಳು ಹೊರಬಿದ್ದುವು. ಅವನೂ ಅವನ ಅಜ್ಜಿಯೂ ಇರುವ ಮನೆಯ ಪ್ರಾಣಿಗಳೆಲ್ಲ ಅಂಜುಕುಳಿಗಳೇ. ನೆರೆಹೊರೆಯವರಲ್ಲಿ ಕೆಲವರು ಕೂಡ ಅಂಜುಕುಳಿಗಳೆಂದೂ ಗೊತ್ತಾಯಿತು.

ಜಮೀನುದಾರರಿಗೆ ಮಹಾರಾಜನ ಪ್ರಧಾನ ಮಂತ್ರಿ ಸುಗುಣವರ್ಮನೊಂದಿಗೆ ತುಂಬ ಪರಿಚಯವಿತ್ತು. ಅವರು ರಾಜಧಾನಿಗೆ ಹೋಗಿ ಅಂಜುಕುಳಿ ಗೋಪಾಲನ ಸಮಾಚಾರವನ್ನೆಲ್ಲಾ ಆ ಮಂತ್ರಿಯೊಂದಿಗೆ ಹೇಳಿದರು. ಬೆಕ್ಕು ಇಲಿಯನ್ನು ನೋಡಿ ಹೆದರಿ ಓಡುವುದೂ, ಜಮೀನುದಾರರ ಬೇಟೇ ಜಾತಿಯ ನಾಯಿ, ಕಳ್ಳರನ್ನು ನೋಡಿ ಬೊಗಳದೆ ಬಾಲ ಮುದುಡುವುದೂ, ನ್ಯಾಯಾಧಿಕಾರಿಯ ವಿಚಿತ್ರ ಪ್ರವರ್ತನೆಯೂ ಮಂತ್ರಿಯನ್ನು ಯೋಚಿಸುವಂತೆ ಮಾಡಿದುವು. ಆ ಗೋಪಾಲನ ಹಸ್ತ ಸ್ಪರ್ಶದಲ್ಲಿ ಏನೋ ಮಹತ್ವವಿರಬೇಕೆಂದು ತೋರಿತು ಮಂತ್ರಿಗೆ, ಗೋಪಾಲನನ್ನು ರಾಜಧಾನಿಗೆ ಕಳುಹಿಸಿ ಕೊಡುವಂತೆ ಸುಗುಣವರ್ಮನು ಜಮೀನುದಾರರಿಗೆ ಹೇಳಿದನು.





" ಅಯ್ಯಾ ! ಅದೇನೂ ಕೇಳಬೇಡಿ ! ನನಗೆ ಏನೋ ಭಯ ಅಂಟಿಕೊಂಡಿದೆ. ನನ್ನನ್ನು ನೆಮ್ಮದಿಯಾಗಿರಲು ಬಿಡಿ ಅಯ್ಯಾ ! " ಎಂದು ಈ ಸಾರಿ ಇನ್ನಿಷ್ಟು ವೇಗ ವಾಗಿ ಓಡಿ ಹೋದನು ಮಲ್ಲ. ಮಂತ್ರಿ ಸುಗುಣ ವರ್ಮನಿಗೆ ಪೂರ್ತಿ ರಹಸ್ಯ ಅರ್ಥವಾಯಿತು.

ಕೂಡಲೇ ಮಂತ್ರಿ ರಾಜನ ಬಳಿಗೆ ಹೋಗಿ ಗೋಪಾಲನ ಸಮಾಚಾರವನ್ನೆಲ್ಲಾ ನಿವೇದಿಸಿದನು. ರಾಜನಿಗೆ ಅದೆಲ್ಲಾ ಬಹಳ ವಿಚಿತ್ರವಾಗಿ ತೋರಿತು. " ಹಾಗಾದರೆ ಅವನೊಬ್ಬ ಶಾಪಗ್ರಸ್ತನಾಗಿ ಹುಟ್ಟಿದ ಯಾವುದೋ ತರಹದ ದಾನವನಾಗಿರಬೇಕು. ಅವನ ಸ್ಪರ್ಶದಿಂದ ಊರವರೆಲ್ಲಾ ಹೇಡಿಗಳಾಗಿ ಹೋಗುವ ಮೊದಲೇ ಅವನನ್ನು ಗಲ್ಲಿಗೇರಿಸಿ ಬಿಡಿ ! ಈ ಉಪದ್ರವನ್ನು ಬೆಳೆಯಗೊಡಬಾರದು " ಎಂದನು ರಾಜ ಕೋಪದಿಂದ.

" ಮಹಾರಾಜಾ, ಅವನನ್ನು ಗಲ್ಲಿಗೇರಿಸಲು ನನಗೆ ಸ್ವಲ್ಪ ವ್ಯವಧಿಕೊಡಿರಿ, ದುಡುಕಿ ಪಾಪಕ್ಕೆ ಒಳ ಗಾಗಬಾರದಷ್ಟೆ ? ಒಂದು ವೇಳೆ ಶಾಪಗ್ರಸ್ತ ಮುನಿ ಯಾಗಿದ್ದರೆ, ಹೊಸ ಅಪಾಯ ಬಂದರೂ ಬರ ಬಹುದು " ಎಂದು ಸುಗುಣವರ್ಮನು ರಾಜನನ್ನು ಶಾಂತಪಡಿಸಿ, ಗೋಪಾಲನಿಗೆ ಎಲ್ಲಾ ಸೌಕರ್ಯಗಳೂ ಇರುವ ಒಂದು ಬಿಡಾರವನ್ನೂ ಏರ್ಪಡಿಸಿಕೊಟ್ಟನು.

ಒಂದು ತಿಂಗಳು ಕಳೆಯಿತು. ಹಠಾತ್ತಾಗಿ ಕಳಿಂಗ ದೇಶದ ರಾಜ ವಿಕ್ರಮಸೇನನು ಮಾಳವ ರಾಜ್ಯದ ಮೇಲೆ ಯುದ್ಧವನ್ನು ಪ್ರಕಟಿದನು. ಮಾಳವವು ಚಿಕ್ಕ ರಾಜ್ಯ. ಬಲವಂತನಾದ ವಿಕ್ರಮಸೇನನೊಂದಿಗೆ ಯುದ್ಧ ಮಾಡುವ ಶಕ್ತಿ ಮಾಳವ ದೇಶಕ್ಕೆ ಇರಲಿಲ್ಲ.

ವಿಕ್ರಮಸೇನನು ಭಾರಿ ಸೈನ್ಯದೊಂದಿಗೆ ಬಂದು ಮಾಳವ ರಾಜ್ಯದ ಸರಿಹದ್ದಿನಲ್ಲಿ ಶಿಬಿರ ನಿರ್ಮಿಸಿ ರಣಭೇರಿ ಮೊಳಗಿಸಲು ತಯಾರಾಗುವನೆಂದು ಮಂತ್ರಿ ಸುಗುಣವರ್ಮನಿಗೆ ಸುದ್ದಿ ಬಂತು. ಅವನು ಚೆನ್ನಾಗಿ ಆಲೋಚನೆ ಮಾಡಿ, ಒಂದು ಪತ್ರ ಬರೆದು

ಅಂಜುಕುಳಿ ಗೋಪಾಲನು ಮಂತ್ರಿಯನ್ನು ನೋಡಲು ಹೋದಾಗ ಆಸ್ಥಾನದ ಮಲ್ಲನು ಮಂತ್ರಿಯ ಮುಂದೆ ನಿಂತಿದ್ದನು. ಸುಗುಣವರ್ಮನು ಅವನೊಂದಿಗೆ ಏನೋ ಹೇಳುತ್ತಿದ್ದನು. ಮಂತ್ರಿ ಗೋಪಾಲನಿಗೆ ಆ ಮಲ್ಲನ ಪರಿಚಯ ಮಾಡಿಸಿದನು. ಗೋಪಾಲನು ಬಹಳ ವಿನಯದಿಂದ ಆ ಮಲ್ಲನಿಗೆ ನಮಸ್ಕಾರ ಮಾಡಿದನು. ಆಗ ಮಲ್ಲನು ಕೈನೀಡಲು ಗೋಪಾಲನು ಕೈಕೊಟ್ಟು ಕರಚಾಲನೆ ಮಾಡಿದನು. ಅಷ್ಟೇ, ಆ ಮಲ್ಲನ ಶರೀರವು ಏನೋ ಹೆದರಿಕೆ ಯಿಂದ ನಡುಗಿತು. ಅವನು ಅಲ್ಲಿ ನಿಲ್ಲದೆ ಓಡ ತೊಡಗಿದನು.

ಮಂತ್ರಿ ಭಟರನ್ನು ಕರೆದು ಆಸ್ಥಾನ ಮಲ್ಲನನ್ನು ತನ್ನ ಬಳಿಗೆ ಎಳೆದುಕೊಂಡು ಬರುವಂತೆ ಆಜ್ಞೆ ಮಾಡಿದನು. ಅವರು ಮಲ್ಲನನ್ನು ಹಿಡಿದು ಕರೆದು ಕೊಂಡು ಬಂದರು. " ಹಾಗೇಕೆ ಓಡಿದೆ ? " ಎಂದು ಮಂತ್ರಿ ಅವನನ್ನು ಕೇಳಿದನು.

ಆದನ್ನು ಗೋಪಾಲನ ಕೈಗೆ ಕೊಟ್ಟು, "ಈ ಪತ್ರವನ್ನು ನೀನು ಸ್ವತಃ ಒಯ್ದು ವಿಕ್ರಮಸೇನ ರಾಜನಿಗೆ ಕೊಡಬೇಕು, ಅವನು ನಿನಗೆ ಒಳ್ಳೆಯ ಬಹುಮಾನ ಕೊಡುತ್ತಾನೆ." ಎಂದು ಹೇಳಿದನು.

ಇಬ್ಬರು ಭಟರು ಗೋಪಾಲನೊಂದಿಗೆ ಹೊರಟರು. ಅವರೊಂದಿಗೆ ಗೋಪಾಲನು ವಿಕ್ರಮಸೇನನ ಶಿಬಿರಕ್ಕೆ ಹೋಗಿ ಸುಗುಣವರ್ಮನು ಕೊಟ್ಟ ಪತ್ರವನ್ನು ಅವನಿಗೆ ಕೊಟ್ಟನು. ಅದೇನೋ ಸಂಧಿಯ ರಾಯಭಾರವಾಗಿರಬೇಕೆಂದುಕೊಂಡು ಬಿಡಿಸಿ ಓದಿದನು ವಿಕ್ರಮಸೇನ ರಾಜ. ಆದರೆ ಅದರಲ್ಲಿ ತುಂಬಾ ಪರುಷ ವಾಕ್ಯಗಳೂ ಬೈಗುಳೂ ಇದ್ದುವು.

ವಿಕ್ರಮಸೇನನು ಕೋಪವನ್ನು ತಾಳಲಾಗದೆ ಅತ್ಯುಗ್ರನಾಗಿ ಕಣ್ಣು ತಿರುಗಿಸುತ್ತ "ಈ ಹಾಳು ಪತ್ರ ತಂದ ಈ ನರಹುಳದ ತಲೆ ಕಡಿಯಿರಿ !" ಎಂದು ಸೈನಿಕನೊಬ್ಬನಿಗೆ ಆಜ್ಞೆ ಮಾಡಿದನು.

ಅಂಜುಕುಳಿ ಗೋಪಾಲನು ಹೆದರಿ ತರಗೆಲೆಯಂತೆ ನಡುಗುತ್ತ "ಮಹಾ ಪ್ರಭೋ ! ಆ ಪತ್ರದಲ್ಲಿ ಏನಿದೆಯೋ ನನಗೆ ತಿಳಿಯದು. ಮಂತ್ರಿಯವರು ಕೊಡುವಂತೆ ಹೇಳಿ ನನಗೆ ಕೊಟ್ಟದ್ದು. ನನ್ನನ್ನು ಕೊಲ್ಲಿಸಬೇಡಿ, ನಿಮ್ಮ ದಮ್ಮಯ್ಯ !" ಎನ್ನುತ್ತಾ ರಾಜಾ ವಿಕ್ರಮಸೇನನ ಕಾಲುಗಳ ಮೇಲೆ ಬಿದ್ದು ಗಟ್ಟಿಯಾಗಿ ಹಿಡಿದುಕೊಂಡನು.

ಮಹಾವೀರನಾದ ವಿಕ್ರಮಸೇನನು ಆ ಕ್ಷಣದ ವರೆಗೂ ಪುಕ್ಕಲು ತನವೇನೆಂದೇ ತಿಳಿಯದಿದ್ದವನು, ಅಂಜುಕುಳಿ ಗೋಪಾಲನ ಸ್ಪರ್ಶದಿಂದ ಮೈಯೆಲ್ಲಾ ಜುಮುಗುಟ್ಟಿದಂತಾಗಿ ನಡುಗುತ್ತ, "ಅಯ್ಯಯ್ಯೊ ! ನಾನೇಕೆ ಯುದ್ಧಕ್ಕೆ ಬಂದೆನೋ ! ಇಂಥಾ ಮಾಳವ ರಾಜನನ್ನು ನಾನೇನು ಜಯಿಸಿಯೇನು ! ಎಲ್ಲಾ ಶಿಬಿರ ಎತ್ತಿರೋ ! ಹಿಂದಿರುಗಿ ಹೋಗಿ ಬಿಡಿರೋ ! ನಾನಿದೋ ಹೊರಟೆನು" ಎಂದು ಸೈನಿಕರಿಗೆ ಆಜ್ಞೆ ಮಾಡಿ, ಅಲ್ಲಿಂದ ಬೇಗ ಬೇಗನೇ ಹೊರಟನು.

ವಿಕ್ರಮಸೇನನೂ ಅವನ ಸೈನಿಕರೂ ತಮ್ಮನ್ನು ಯಾರೋ ಅಟ್ಟಿಸಿಕೊಂಡು ಬರುವಂತೆ ಅಲ್ಲಿಂದ ಓಡಿ ಹೋಗ ತೊಡಗಿದರು.

ಹೀಗೆ ಅಂಜುಕುಳಿ ಗೋಪಾಲನು ತನಗೆ ತಿಳಿಯದಂತೆಯೇ, ಮಾಳವ ರಾಜ್ಯವನ್ನೂ, ಭಾರೀ ಜನ ನಷ್ಟವನ್ನೂ, ಧನ ನಷ್ಟವನ್ನೂ ತಪ್ಪಿಸಿದನು. ಈ ಬಗೆಯ ದೊಡ್ಡ ಘನಕಾರ್ಯ ಮಾಡಿ ರಾಜನ ಮೆಚ್ಚುಗೆಗೆ ಪಾತ್ರನಾದನು. ಆ ಕಾರಣದಿಂದ ಧೈರ್ಯವು ಅವನೊಳಗೆ ಹೊಕ್ಕಿತು, ಅಂಜುಕುಳಿತನ ಹೋಯಿತು. ಮತ್ತೆ ಅವನ ಸ್ಪರ್ಶದಿಂದ ಯಾರೂ ಅಂಜುಕುಳಿಗಳಾಗಲೇ ಇಲ್ಲ. ರಾಜನ ಸನ್ಮಾನದಿಂದ ದೊಡ್ಡವನಾಗಿ, ಸೈನ್ಯಕ್ಕೆ ಸೇರಿ ಮಹಾ ವೀರನೆಂಬ ಕೀರ್ತಿಗೂ ಪಾತ್ರನಾದನು ಗೋಪಾಲ.





# ಪಿತೃದ್ರೋಹಿ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಬ್ಬ ರೈತನ ಮನೆಯಲ್ಲಿ ಜನ್ಮವೆತ್ತಿದ್ದನು. ತಂದೆ ತಾಯಿಯರು ತಮಗೆ ಜನಿಸಿದ ಮಗುವನ್ನು ಬಹಳ ಅಚ್ಕರೆಯಿಂದ ಕೊಂಡಾಡಿ ಕೊಂಡು ಬೆಳೆಯಿಸಿದರು, ಅವರು ಅವನಿಗೆ ಕಮಲಾಕ್ಷನೆಂದು ಹೆಸರಿಟ್ಟಿದ್ದರು. ಅವನ ಕಣ್ಣುಗಳು ಬಹಳ ಸುಂದರವಾಗಿದ್ದುವು.

ಕಮಲಾಕ್ಷನು ಚಿಕ್ಕತನದಿಂದಲೂ ವಯಸ್ಸಿಗೆ ಮೀರಿದ ಬುದ್ಧಿವಂತಿಕೆಯನ್ನು ತೋರಿಸುತ್ತಾ ಬೆಳೆಯುತ್ತಿದ್ದನು, ತಂದೆ ತಾಯಿಗಳು ತನ್ನನ್ನು ಎಷ್ಟು ಪ್ರೀತಿಯಿಂದ ನೋಡುತ್ತಿದ್ದರೋ, ಅದಕ್ಕಿಂತ ಹೆಚ್ಚಿನ ಪ್ರೀತಿ ಅವನಿಗೆ ತನ್ನ ತಾತನ ಮೇಲಿದ್ದಿತು.

ಎದ್ದು ನಡೆದಾಡಲು ಸಾಧ್ಯವಿಲ್ಲದ ಆ ತಾತನಿಗೆ ಬೇರೆಯವರು ನೋಡಿಕೊಂಡು ಉಪಚಾರ ಮಾಡಬೇಕಾಗಿತ್ತು. ಇದು ಮುಖ್ಯವಾಗಿ ಕಮಲಾಕ್ಷನ ತಾಯಿಗೆ ಬಹಳ ಬಾಧೆಯನ್ನುಂಟುಮಾಡುತ್ತಿತ್ತು. ಈ ಮುದುಕ ಯಾವಾಗ ಸಾಯುವನೋ ಎಂದು ಅವಳು ಅಹರ್ನಿಶಿ ಆಲೋಚಿಸಿಕೊಂಡಿದ್ದಳು. ಆದರೆ ಹಣ್ಣು ಹಣ್ಣು ಮುದುಕ ಇದ್ದ ಹಾಗೆಯೇ ಇದ್ದಾನೆ. ಹಸಿವೆಯಾಗುತ್ತಿತ್ತು, ಆಹಾರ ಸೇವನೆಯೂ, ಜೀರ್ಣಶಕ್ತಿಯೂ ಸರಿಯಾಗಿಯೇ ನಡೆಯುತಿತ್ತು.

ಒಂದು ದಿನ ಕಮಲಾಕ್ಷನ ತಾಯಿ ತನ್ನ ಗಂಡನೊಂದಿಗೆ, "ನಿಮ್ಮ ಅಪ್ಪನನ್ನು ನೋಡಿ ನೋಡೀ, ಮಾಡಿ ಮಾಡೀ ನನ್ನ ಪ್ರಾಣ ಹೋಗುತ್ತಾ ಇದೆ. ಉಳಿದ ಕೆಲಸಗಳೆಲ್ಲಾ ಒಂದು ತೂಕವಾದರೆ ಅವರ ಸೇವೆ ಇನ್ನೊಂದು ತೂಕವಾಗಿದೆ !" ಎಂದಳು.

"ಸಹಿಸಿಕೋ. ತುಂಬಾ ಪ್ರಾಯವಾಯಿತು, ಇನ್ನು ಹೆಚ್ಚು ಕಾಲ ಬದುಕಿರಲಿಕ್ಕಿಲ್ಲ" ಎಂದನು ರೈತ.

"ಎಷ್ಟು ಮಂದಿಗೆ ಸಾವು ಬರುತ್ತಿದ್ದರೂ ಇವರಿಗೆ ಮಾತ್ರ ಬರುವುದೇ ಇಲ್ಲ. ನನ್ನ ಜನ್ಮಕ್ಕಂತೂ ಈ ಕಷ್ಟದಿಂದ ವಿಮೋಚನೆಯೇ ಇಲ್ಲ !" ಎಂದು ಅವನ ಹೆಂಡತಿ ಬುಳುಬುಳು ಅತ್ತಳು.

"ಏನು ಮಾಡುವುದು ? ಕೈಯಾರೆ ಕೊಲ್ಲಬೇಕೆನ್ನುವೆಯಾ ?" ಎಂದನು ರೈತ.

"ಕೊಂದರೇನಂತೆ ? ಬದುಕಿರುವುದರಿಂದ ಅವರಿಗೂ ಸುಖವಿಲ್ಲ. ನಮಗೂ ಸುಖವಿಲ್ಲ, ಮುದಿಪ್ರಾಣ ಹೋಗಲಿಕ್ಕೆ ಏನಾಗಬೇಕು ? ಥಕ್ಕನೆ ಗೊಟಕ್ಕೆನ್ನಿಸಿ ಪುಣ್ಯ ಕಟ್ಟಿಕೊಳ್ಳಿ" ಎಂದಳು ಹೆಂಡತಿ.



ತಂದೆಯನ್ನು ಕೈಯಾರೆ ಕೊಲ್ಲುವುದೆಂದರೆ ರೈತನಿಗೆ ಬಹು ಘೋರವೆನಿಸಿತು. ಮೊದಮೊದಲು ಅವನು ಹೆಂಡತಿಯ ಮಾತು ಲಕ್ಷಿಸಲಿಲ್ಲ. ಆದರೆ ದಿನಾ ಅವಳು ಕಾಟಕೊಡಲು ಶುರುಮಾಡಿದ ಮೇಲೆ, ಅದರಲ್ಲಿ ದೊಡ್ಡ ತಪ್ಪೇನಿಲ್ಲವೆಂದು ತೋರಿತು.

ಕಡೆಗೆ ಒಂದು ದಿನ ರೈತನು ಯಾರಿಗೂ ತಿಳಿಯದಂತೆ ತನ್ನ ತಂದೆಯನ್ನು ಕೊಂದು ಮಾಯಮಾಡಲು ಒಂದು ಉಪಾಯವನ್ನು ಕಾರ್ಯರೂಪಕ್ಕೆ ತರಲು ತೊಡಗಿದನು. ಅವನು ತನ್ನ ತಂದೆಯ ಬಳಿಗೆ ಹೋಗಿ, "ಅಪ್ಪಾ, ಪಕ್ಕದ ಊರಿನಲ್ಲಿ ಸಾಲದ ಹಣ ಸ್ವಲ್ಪ ಕೇಳಿದ್ದೇನೆ. ಅವರು ಅಪ್ಪನನ್ನು ಕರೆದುಕೊಂಡು ಬಂದ ಹೊರತು, ಸಾಲ ಕೊಡಲು ಸಾಧ್ಯವಿಲ್ಲ ಅಂದಿದ್ದಾರೆ. ಸ್ವಲ್ಪ ಸಹನೆ ತಂದುಕೋ ಅಪ್ಪಾ. ಗಾಡಿಯಲ್ಲಿ ಹೋಗಿಬರೋಣ" ಎಂದನು.

ಮುದುಕನು ನಿಜವೇ ಎಂದುಕೊಂಡು ಹೊರಟನು. ತಾತನನ್ನು ಬಿಟ್ಟು ಒಂದು ಕ್ಷಣವೂ ಇರಲಾಗದ ಕಮಲಾಕ್ಷನು ಕೂಡಾ, ಯಾರೆಷ್ಟು ಹೇಳಿದರೂ ಕೇಳದೆ ಗಾಡಿಯಲ್ಲಿ ಹತ್ತಿ ಕುಳಿತನು.

ಬೇರೆ ಉಪಾಯವಿಲ್ಲದೆ ರೈತನು ತನ್ನ ತಂದೆಯನ್ನೂ, ಮಗನನ್ನೂ ಗಾಡಿಯಲ್ಲಿ ಕೂಡಿಸಿಕೊಂಡು ಗಾಡಿಯನ್ನು ಸಾಗಿಸಿಕೊಂಡು ಹೋದನು. ಅವರು ಹೋಗುವ ದಾರಿಯಲ್ಲಿ ಚಿಕ್ಕದೊಂದು ಅಡವಿ ಬಂಧಿತು. ಅಡವಿಯ ಮಧ್ಯದಲ್ಲಿ ರೈತನು ಗಾಡಿಯನ್ನು ನಿಲ್ಲಿಸಿ "ಈಗಲೇ ಬರುತ್ತೇನೆ" ಎಂದು ಗಾಡಿಯಲ್ಲಿಟ್ಟಿದ್ದ ಒಂದು ಗಥಾರೆಯನ್ನು ಎತ್ತಿಕೊಂಡು ಮರಗಳಾಚೆಗೆ ಹೋದನು.

ಕಮಲಾಕ್ಷನು ತಾತನೊಂದಿಗೆ, "ಈಗಲೇ ಬರುತ್ತೇನೆ ತಾತಾ" ಎಂದು ಹೇಳಿ, ಮತ್ತೊಂದು ಸಣ್ಣ ಪಾರಂಗಿಯನ್ನು ಎತ್ತಿಕೊಂಡು ತಂದೆಗೆ ಗೊತ್ತಾಗದ ಹಾಗೆ ಕಾಡಿನ ಇನ್ನೊಂದು ಬದಿಗೆ ಹೋದನು. ಸ್ವಲ್ಪ ದೂರ ಹೋದಮೇಲೆ ತಂದೆ ಒಂದು ಪೊದರಿನ ಹತ್ತಿರ ಹೊಂಡ ತೋಡುವುದನ್ನು ನೋಡಿದನು, ಕಮಲಾಕ್ಷನು ಅದೇ ಪೊದೆಯ ಆಚೆಯ ಬದಿಯಲ್ಲಿ ತಾನು ಕೂಡಾ ಒಂದು ಹೊಂಡ ತೆಗೆಯಲು ಪ್ರಾರಂಭಿಸಿದನು.

ರೈತನಿಗೆ, ತಾನು ಹೊಂಡ ತೆಗೆಯುವುದು ಮಾತ್ರವಲ್ಲದೆ, ಪಕ್ಕದಲ್ಲಿ ಮತ್ತಾರೋ ಹೊಂಡ ತೆಗೆಯುವ ಹಾಗೆ ಶಬ್ದ ಕೇಳಿ ಆಶ್ಚರ್ಯವಾಯಿತು. ತಾನು ನೆಲಕ್ಕೆ ಗುದ್ದುವ ಶಬ್ದದ ಪ್ರತಿಧ್ವನಿಯಂತೆ ಆ ಶಬ್ದವಿರಲಿಲ್ಲ. ಅಂತಲೇ ಅವನು ತನ್ನ ಕೆಲಸವನ್ನು ನಿಲ್ಲಿಸಿ, ಪೊದರಿನ ಆಚೆಯ ಬದಿಯಲ್ಲಿ ಸಣ್ಣ ಪಾರಂಗಿಯನ್ನು ಹಿಡಿದುಕೊಂಡು ಗುಳಿ ತೋಡುತ್ತಿರುವ ಮಗನನ್ನು ನೋಡಿ, ಆಶ್ಚರ್ಯಪಡುತ್ತ, "ಏಕೆ ಇಲ್ಲಿ ಹೊಂಡ ತೋಡುವುದು ?" ಎಂದು ಪ್ರಶ್ನೆ ಮಾಡಿದನು.

ಕಮಲಾಕ್ಷನು ತಂದೆಯನ್ನು ನೋಡಿ, "ನೀನೇಕೆ ಹೊಂಡ ತೆಗೆಯುವಿಯೋ ಅದಕ್ಕೇ ಅಪ್ಪಾ" ಎಂದನು.

"ನಾನು ಏಕೆ ಹೊಂಡ ತೆಗೆಯುವೆನೆಂದು ನಿನಗೆ ಗೊತ್ತಿದೆಯೋ ?" ಎಂದು ರೈತನು ಕೇಳಿದನು.

"ಅದು ನನಗೆ ಗೊತ್ತಿಲ್ಲ ಅಪ್ಪಾ, ಏಕೆ ಹೊಂಡ ತೆಗೆಯುವುದು ?" ಎಂದನು ಕಮಲಾಕ್ಷ.

"ನಾನು ನನ್ನ ಅಪ್ಪನನ್ನು ಹುಗಿಯಲಿಕ್ಕೆ ಹೊಂಡ ತೋಡುತ್ತೇನೆ. ಅವರು ಮುದುಕರಾಗಿ ಸಾಯುವ ಸ್ಥಿತಿಯಲ್ಲಿದ್ದಾರೆ. ಅವರು ಥಕ್ಕನೆ ಸತ್ತರೆ ಹುಗಿಯಬೇಕಾದ್ದು ನನ್ನ ವಿಧಿ. ಏಕೆಂದರೆ ನಾನು ಅವರ ಮಗನಾದುದರಿಂದ, ಸತ್ತರೆ ಶವವನ್ನು ತುಂಬ ಹೊತ್ತು ಹೊರಗಿಡಬಾರದು" ಎಂದನು ರೈತ.

"ಅವರು ಇನ್ನೂ ಬದುಕಿಕೊಂಡೇ ಇದ್ದಾರಷ್ಟೇ ಅಪ್ಪಾ" ಎಂದನು ಕಮಲಾಕ್ಷ.

"ಯಾರ ಪ್ರಾಣ ಯಾವಾಗ ಹೋಗುವುದೆಂದು ಯಾರಿಗೂ ಗೊತ್ತಾಗುವುದಿಲ್ಲವಪ್ಪ" ಎಂದನು ರೈತ.

"ಹಾಗಾದರೆ ನನ್ನ ಅಪ್ಪನ ಪ್ರಾಣ ಯಾವಾಗ ಹೋಗುವುದೋ, ಅವರನ್ನು ಹುಗಿಯಬೇಕಾದ ವಿಧಿ ನನಗೂ ಇದೆಯಷ್ಟೇ?" ಎಂದನು ಕಮಲಾಕ್ಷ.

ರೈತನ ತಲೆಗೇ ಪೆಟ್ಟು ಬಿದ್ದ ಹಾಗಾಯಿತು. ತನ್ನ ಮಗನ ಬಾಯಿಯಿಂದ ಆ ಮಾತು ಬರುವವರೆಗೂ ತಾನು ಎಂತಹ ನೀಚ ಕೆಲಸ ಮಾಡುತ್ತಿದ್ದೇನೆಂದು ಅವನಿಗೆ ಗೊತ್ತಾಗಲಿಲ್ಲ. ಅವನು ನಾಚಿಕೊಂಡು ಗಢಾರೆಯನ್ನು ಹೆಗಲಿಗಿಟ್ಟು "ಮನೆಗೆ ಹೋಗೋಣ ನಡೆ" ಎಂದು ಗಾಡಿಯ ಕಡೆಗೆ ಹೊರಟನು. ಕಮಲಾಕ್ಷನೂ ತಂದೆಯ ಹಿಂದೆ ಹೊರಟನು.

ರೈತನು ಗಾಡಿಯನ್ನು ಹಿಂದಿರುಗಿಸಿ ಮನೆಗೆ ಬಂದನು. ಮನೆಯಲ್ಲಿ ಕಮಲಾಕ್ಷನ ತಾಯಿ ಮಾವಯ್ಯ ಸತ್ತು ಹೋದರೆಂದು ತಿಳಿದು ಆನಂದದಿಂದ ಹಬ್ಬದ ಅಡಿಗೆ ಮಾಡಿ, ಗಂಡನೂ ಮಗನೂ ಹಿಂದಿರುಗುವುದನ್ನು ಇದಿರು ನೋಡಿಕೊಂಡಿದ್ದಳು.

ತಿರುಗಿ ಬಂದ ಗಾಡಿಯಲ್ಲಿ ಮಾವಯ್ಯನಿರುವುದನ್ನು ನೋಡಿ ಅವಳಿಗೆ ತುಂಬಾ ನಿರಾಶೆಯಾಯಿತು. ರೈತನು ಹೆಂಡತಿಯೊಂದಿಗೆ ನಡೆದ ಸಂಗತಿಯನ್ನು ಹೇಳಿದನು. ಕಮಲಾಕ್ಷನು ಮಾಡಿದ ಕೆಲಸ ನೋಡಿ ಅವಳಿಗೆ ಗುಂಡಿಗೆ ಹಿಚುಕಿದ ಹಾಗಾಯಿತು.

"ಅವನನ್ನು ಎಷ್ಟು ಪ್ರೀತಿಯಿಂದ ಬೆಳೆಸಿದೆನು. ಹೀಗೆ ತಂದೆಗೆ ಹೊಂಡ ತೆಗೆಯುತ್ತಾನೆಯೇ ? ಹೇಗೆ ಅವನ ಮುಖ ನೋಡಲಿ?" ಎಂದಳು ಗಂಡನೊಂದಿಗೆ.

"ನನ್ನ ಅಪ್ಪ ಕೂಡಾ ಹೀಗೆಯೇ ಪ್ರೀತಿಯಿಂದ ನನ್ನನ್ನು ಬೆಳೆಸಲಿಲ್ಲವೆ ? ನಾನು ಮಾಡಿದ ಕೆಲಸ ಎಂಥದ್ದು ? ನಮ್ಮ ಮಗನಿಗೆ ನಮ್ಮ ಮೇಲೆ ಅಪೇಕ್ಷೆ ಇಲ್ಲವೆಂದೇನಿಲ್ಲ. ನಮಗೆ ಬುದ್ಧಿ ಕಲಿಸಲು ಹೀಗೆ ಮಾಡಿದ್ದಾನೆ. ನಮ್ಮ ಮಗ ತುಂಬ ದೊಡ್ಡ ಮಹಾತ್ಮನು !" ಎಂದನು ರೈತ. ಆಮೇಲೆ ತಂದೆ ತಾಯಿಗಳು ಯಾವ ನೀಚತನಕ್ಕೂ ತಲೆ ಹಾಕಲಿಲ್ಲ.





# ಸಿಪಾಯಿಗಳ ದಂಗೆ

ಹೊಸ ಪ್ರಾಂತಗಳನ್ನು ಜಯಿಸಿ, ರಕ್ಷಣೆಮಾಡಲು ಈಸ್ಟಿಂಡಿಯಾ ಕಂಪೆನೀಗೆ ದೊಡ್ಡ ಸೈನ್ಯ ಬೇಕಾಯಿತು. ಭಾರತೀಯರನ್ನು ಕ್ರಮವಾಗಿ ಸೈನ್ಯದಲ್ಲಿ ಸೇರಿಸಿಕೊಳ್ಳತೊಡಗಿದರು. ಆದರೆ ಭಾರತೀಯ ಸಿಪಾಯಿಗಳಿಗೆ ಬ್ರಿಟಿಷ್ ಸಿಪಾಯಿಗಳಿಗಿಂತ ಸಂಬಳ, ಭತ್ಯೆಗಳು ಕಡಿಮೆ. ಆದರ ಮೇಲೆ ಬಗೆ ಬಗೆಯಾಗಿ ಅವಮಾನಿಸುತ್ತಿದ್ದರು. ಆಂಗ್ಲೇಯ ಸೈನಿಕನು ಕುದುರೆ ಸವಾರಿ ಮಾಡುವಾಗ ಭಾರತೀಯ ಸಿಪಾಯಿ ಅವನ ಸಾಮಗ್ರಿಗಳನ್ನು ಹೊತ್ತುಕೊಂಡು ಹೋಗಬೇಕಿತ್ತು.

ಆಂಗ್ಲೇಯರು ಸೈನಿಕರಿಗೆ ಹೊಸ ತುಪಾಕಿಗಳನ್ನು ಸರಬರಾಯಿ ಮಾಡಿದರು. ಆ ತುಪಾಕಿಗಳ ಸಿಡಿ ಮದ್ದಿನ ಮೇಲೆ ಪ್ರಾಣಿಗಳ ಕೊಬ್ಬನ್ನು ಅಂಟಿಸಿದ್ದರು. ಅವುಗಳನ್ನು ಸೈನಿಕರು ಹಲ್ಲಿನಿಂದ ಕಚ್ಚಿ ಉಪಯೋಗಿಸಬೇಕು. ತಮ್ಮ ಮತ ವಿಶ್ವಾಸಗಳಿಗೆ ಅವಮಾನ ಪಡಿಸುವ ಉದ್ದೇಶದಿಂದ ಕೊಬ್ಬನ್ನು ಹಚ್ಚಿರುವರೆಂದು ಹಿಂದೂ ಮುಸ್ಲಿಂ ಸೈನಿಕರು ಕುದಿಯ ತೊಡಗಿದರು.





ಅದರ ಫಲಿತವಾಗಿ ೧೮೫೭ ನೇ ವರ್ಷದ, ಮೇ ಹತ್ತನೇ ತಾರೀಕಿನ ದಿನ ಮೀರಟ್‌ನಲ್ಲಿ ಸೈನಿಕರು ಬ್ರಿಟಿಷ್ ಅಧಿಕಾರಿಗಳ ಮೇಲೆ ಬಂಡಾಯವೆದ್ದು ಅವರನ್ನು ಬಂದೀಗಳಾಗಿ ಹಿಡಿದುಕೊಂಡರು.



ಭಾರತೀಯ ಸೈನಿಕರು ಅಮಿತೋತ್ಸಾಹದಿಂದ ದಿಲ್ಲಿಯ ಕಡೆಗೆ ಸಾಗಿದರು. ದಾರಿಯಲ್ಲಿ ಕೆಲವರು ಸೈನಿಕರು ಅಲ್ಲಲ್ಲಿದ್ದ ಸೈನಿಕ ಶಿಬಿರಗಳಲ್ಲಿ ಪ್ರವೇಶಿಸಿ ತಮ್ಮ ದಂಗೆಯನ್ನು ಕುರಿತು ತಿಳಿಯಪಡಿಸಿದರು. ಸೈನಿಕರೆಲ್ಲರಲ್ಲಿಯೂ ಅಸಂತೃಪ್ತಿಯೂ, ಅವೇದನೆಯೂ ಇದ್ದುದರಿಂದ ಸಿಪಾಯಿಗಳ ದಂಗೆ ಕಾಡುಗಿಚ್ಚಿನ ಹಾಗೆ ವಿಜೃಂಭಿಸಿ ಹರಡಿತು.

ಭಾರತೀಯ ಸೈನಿಕರು ಸುಪ್ರಸಿದ್ಧವಾದ ಕೆಂಪು ಕೋಟೆಯನ್ನು ವಶಪಡಿಸಿಕೊಂಡು, ಮೊಗಲ್ ವಂಶದವನಾದ ಬಹದ್ದೂರ್ ಷಾನನ್ನು ಚಕ್ರವರ್ತಿಯಾಗಿ ಪ್ರಕಟಿಸಿದರು. ದಿಲ್ಲಿಯಲ್ಲಿದ್ದ ಬ್ರಿಟಿಷ್ ಸೈನ್ಯವು ಸೋತು ಓಡಿತು. ದಿಲ್ಲೀ ಬಂಡಾಯಗಾರರ ವಶವಾಯಿತು.





ಚಿತ್ತೂರಿನಲ್ಲಿ ಎರಡನೇ ಪೇಷ್ವಾ ಬಾಜೀರಾವನ ದತ್ತಪುತ್ರನಾದ ನಾನಾಸಾಹೇಬನನ್ನು ಪೇಷ್ವಾ ವಾರಸುದಾರನೆಂದು ಬ್ರಿಟಿಷ್ ಪ್ರಭುತ್ವವು ಅಂಗೀಕರಿಸಲಿಲ್ಲ. ಆದರೆ ಅಚಂಚಲವಾದ ಧೈರ್ಯ ಸಾಹಸಗಳಿರುವ ಸೇನಾನಾಯಕನಾದ ತಾಂತಿಯಾತೋಪೇ ನಾನಾಸಾಹೇಬನಿಗೆ ಪಟ್ಟಾಭಿಷೇಕ ಮಾಡಿದನು. ನಾನಾಸಾಹೇಬನೂ, ತಾಂತಿಯಾತೋಪೆಯೂ ಸಿಪಾಯಿಗಳ ದಂಗೆಯೊಂದಿಗೆ ಕೂಡಿಕೊಂಡರು.

ಝಾನ್ಸೀರಾಣಿ ಲಕ್ಷ್ಮೀಬಾಯಿ ಮಗನನ್ನು ದತ್ತಕ್ಕೆ ತೆಗೆದುಕೊಂಡಿದ್ದರೂ, ಆಕೆಯ ರಾಜ್ಯವನ್ನು ವಾರಸರಿಲ್ಲದ ರಾಜ್ಯವೆಂದು ಪ್ರಕಟಿಸಿ ಬ್ರಿಟಿಷರು ಅದನ್ನು ಆಕ್ರಮಿಸಲು ತಮ್ಮ ಸೈನ್ಯವನ್ನು ತಂದು ಇಳಿಸಿದರು. ಲಕ್ಷ್ಮೀಬಾಯಿ ತನ್ನ ಸೇನೆಗಳಿಗೆ ತಾನೇ ಸ್ವತಃ ನಾಯಕತ್ವ ವಹಿಸಿ, ಧೈರ್ಯ ಸಾಹಸಗಳಿಂದ ಹೋರಾಡಿ, ಬ್ರಿಟಿಷ್ ಸೈನ್ಯವನ್ನು ಸೋಲಿಸಿ, ಸೇನಾಧಿಪತಿಗಳನ್ನು ಬಂದಿಗಳಾಗಿ ಹಿಡಿದುಕೊಂಡಳು.





ಬಂದಿಗಳಾದ ಸೈನಿಕರನ್ನು ಅವಳು ಗೌರವದಿಂದಲೇ ನೋಡಿದಳು. "ನಿಮ್ಮನ್ನು ನಮ್ಮ ಅತಿಥಿಗಳಾಗಿ ನೋಡಿಕೊಳ್ಳುತ್ತೇವೆ. ಆದರೆ ನಮ್ಮ ಆಚಾರ ವ್ಯವಹಾರಗಳನ್ನು ನಿಂದಿಸುವ ಅಧಿಕಾರ ನಿಮ್ಮ ಒಡೆಯರಿಗೆ ಇಲ್ಲವೆಂದು ನೀವು ಅವರಿಗೆ ತಿಳಿಸಬೇಕು" ಎಂದು ಬ್ರಿಟಿಷ್ ಸೈನಿಕರನ್ನು ಎಚ್ಚರಿಸಿದಳು. ಅಷ್ಟರಲ್ಲಿ ಹಠಾತ್ತಾಗಿ, ಸಮರ್ಥನೆಂದು ಹೆಸರು ಪಡೆದ ಸರ್ ಹಗ್ರೋಜ್‌ನ ನಾಯಕತ್ವದಲ್ಲಿ ಹೊಸ ಬ್ರಿಟಿಷ್ ಸೈನ್ಯವು ಬಂದು ಝಾನ್ಸೀ ರಾಜ್ಯವನ್ನು ಮುತ್ತಿಗೆ ಹಾಕಿತು.

ಲಕ್ಷ್ಮೀಬಾಯಿ ಸೈನಿಕನಂತೆ ನಿಂತು ಅಪೂರ್ವವಾದ ಧೈರ್ಯದಿಂದ ಹೋರಾಡಿ, ಕೋಟೆಯನ್ನು ರಕ್ಷಿಸಿಕೊಂಡಳು. ಆಮೇಲೆ ಅಧಿಕ ಸಂಖ್ಯೆಯಲ್ಲಿ ಬಂದ ಬ್ರಿಟಿಷ್ ಸೈನ್ಯವೂ, ಅವರಲ್ಲಿದ್ದ ಆಧುನಿಕ ಆಯುಧಗಳೂ ತಡೆಯಲಾಗದಂತಾದುವು. ಕೊನೆಗೆ ತನ್ನ ದತ್ತ ಕುಮಾರನಾದ ಶಿಶುವನ್ನು ಸುರಕ್ಷಿತವಾಗಿ ಎತ್ತಿಕೊಂಡು ಅಲ್ಲಿಂದ ತಪ್ಪಿಸಿಕೊಂಡಳು ಲಕ್ಷ್ಮೀಬಾಯಿ.





ನಾನಾಸಾಹೇಬನೂ, ತಾಂತಿಯಾತೋಪೆಯೂ ಝಾನ್ಸೀರಾಣಿಯನ್ನು ಕಲೆತುಕೊಂಡರು. ಅವರು ಸೈನ್ಯವನ್ನು ಸೇರಿಸಿಕೊಂಡು ಗ್ವಾಲಿಯರ್‌ನ ಮೇಲೆ ಧಾಳಿ ನಡೆಸಿದರು. ಬ್ರಿಟಿಷರ ಪಕ್ಷ ವಹಿಸಿದ ಗ್ವಾಲಿಯರ್ ಸಿಂಧಿಯಾ ಕೋಟೆಯನ್ನು ಬಿಟ್ಟು ಓಡಿಹೋದನು. ಗ್ವಾಲಿಯರ್ ಸೈನ್ಯವು ಲಕ್ಷ್ಮೀಬಾಯಿಯ ಸೈನ್ಯದೊಂದಿಗೆ ಕೂಡಿ, ಅಲ್ಲಿದ್ದ ಬ್ರಿಟಿಷ್ ಸೇನೆಗಳನ್ನು ನಿರ್ನಾಮ ಮಾಡಿದುವು.

ಬಲುಬೇಗನೇ ಸರ್‌ಹ್ಯಗ್‌ರೋಜ್ ದೊಡ್ಡ ಸೈನ್ಯ ದೊಂದಿಗೆ ಗ್ವಾಲಿಯರಿಗೆ ಬಂದು ಮುಟ್ಟಿದನು. ಎರಡು ಸಾರಿ ಭಯಂಕರ ಯುದ್ಧಗಳು ನಡೆದ ಮೇಲೆ, ಝಾನ್ಸೀರಾಣಿ ಅಲ್ಲಿಂದ ತಪ್ಪಿಸಿಕೊಳ್ಳ ಬೇಕಾಗಿ ಬಂದಿತು. ಬ್ರಿಟಿಷ್ ಸೈನಿಕರು ಅವಳನ್ನು ಬೆಂಬತ್ತಿ ಹೋದರು. ದಾರಿಯಲ್ಲಿ ಅವಳನ್ನು ಆಟಕಾಯಿಸಿ ಗಾಯಪಡಿಸಿದರಷ್ಟೇ ಹೊರತು ಅವಳನ್ನು ಹಿಡಿಯಲು ಅವರಿಂದಾಗಲಿಲ್ಲ.





ಗಾಯಗೊಂಡ ಝಾನ್ಸೀರಾಣಿ ತನ್ನ ಉದ್ಯಾನ ವನವನ್ನು ಸೇರಿ, ೧೮೫೮ನೇ ವರ್ಷ ಮೇ ೧೭ನೇ ತಾರೀಕಿನ ದಿನ ಮರಣಗೊಂಡಳು. ಅವಳ ಮರಣ ವಾರ್ತೆಯನ್ನು ಕೇಳಿ ಬ್ರಿಟಿಷ್ ಸೇನೆಗಳು ಅಲ್ಲಿಗೆ ಬರುವುದಕ್ಕೆ ಮೊದಲೇ ರಾಣಿಯ ಮಿತ್ರರೂ ಪರಿಚಾರಿಕೆಯರೂ ಅವಳ ಭೌತಿಕ ಕಾಯವನ್ನು ದಹನ ಮಾಡಿದರು. ಪ್ರಪಂಚ ಚರಿತ್ರೆಯಲ್ಲಿ ಝಾನ್ಸೀರಾಣಿ ಲಕ್ಷ್ಮೀಬಾಯಿ ಮರೆಯಲಾಗದ ವೀರ ವನಿತೆಯಾಗಿ ನಿಂತು ಕೊಂಡಿರುವಳು !



# ಕಳ್ಳರ ಕಾಟ

ಒಂದು ಕಾಲದಲ್ಲಿ ಪುಳಿಂದ ರಾಜ್ಯದ ಮಹಾ ನಗರಗಳಲ್ಲಿ ಒಂದಾದ ಪ್ರಶಾಂತಗಿರಿಯನ್ನು ಹೊಸತಾಗಿ ಬಂದ ಪುರಂಧರನೆಂಬುವನು ರಾಜ ಪ್ರತಿನಿಧಿಯಾಗಿ, ಪರಿಪಾಲನೆಯನ್ನು ನೋಡಿಕೊಳ್ಳುತ್ತಿದ್ದನು. ಅವನು ಒಳ್ಳೆಯ ' ಸಮರ್ಥನಾದ ಪಾಲಕನೆಂದು ಮಹಾರಾಜನಿಂದ ಪ್ರಶಂಸಿಸಲ್ಪಟ್ಟವನಾಗಿದ್ದನು. ಈ ಮೊದಲು ಪ್ರಶಾಂತಗಿರಿಯಲ್ಲಿದ್ದವನು ಅಷ್ಟು ಸಮರ್ಥನಲ್ಲವೆಂದು ರಾಜನಿಗೆ ತೋರಿತ್ತು.

ಒಂದು ದಿನ ಪುರಂಧರನು ತನ್ನ ಸಲಹಾದಾರರೊಂದಿಗೆ ನಗರದ ವ್ಯವಹಾರಗಳನ್ನು ಕುರಿತು ಮಾತಾಡಿಕೊಂಡಿದ್ದನು. ಆಗ ಕೆಲವರು ಪೌರರು ಅವನ ಹತ್ತಿರ ಬಂದು, "ಅಯ್ಯಾ, ನಗರದಲ್ಲಿ ಹಟ್ಟ ಹಗಲೇ ಕಳ್ಳರು ಅಂಕೆಶಂಕೆ ಇಲ್ಲದೆ ತಿರುಗಾಡಿಕೊಂಡಿದ್ದಾರೆ. ಇನ್ನು ರಾತ್ರಿಯಾಯಿತೆಂದರೆ ಕೇಳುವುದೇ ಬೇಡ. ತಾವು ಈ ಕಳ್ಳರ ಕಾಟದಿಂದ ಪುರಜನರನ್ನು ಕಾಪಾಡಲು ತಕ್ಕ ಬಂದೋಬಸ್ತುಗಳನ್ನು ಏರ್ಪಡಿಸಬೇಕು " ಎಂದು ಬಿನ್ನವಿಸಿಕೊಂಡರು.

ಪುರಂಧರನು ಪೌರರು ಹೇಳಿದುದನ್ನು ಕೇಳಿ, ಕಿರುಗೋಪ ತಂದುಕೊಂಡು, "ನಾನು ಈ ನಗರ ಪಾಲಕನಾಗಿ ಬರುವುದಕ್ಕೆ ಮೊದಲು ಇಲ್ಲಿ ಎಂತಹ ಅರಾಜಕ ಪರಿಸ್ಥಿತಿಗಳಿದ್ದುವೋ ನಿಮಗೆಲ್ಲಾ ಗೊತ್ತಿದೆ ತಾನೇ ? ಇತ್ತೀಚೆಗೆ ಹೊಸ ಹೊಸ ಜನರು ಬರುವುದರಿಂದ ನಗರದ ಪರಿಸರಗಳು ಬೆಳೆಯುತ್ತಾ ಇವೆ. ಇಂತಹ ಮಹಾ ನಗರದಲ್ಲಿ ಎಲ್ಲಿಯೋ ಮೂರು ಮೂಲೆಯಲ್ಲಿ ಆಗೀಗ ಕಳ್ಳತನವೋ, ದಾರಿದೋಚುವಿಕೆಯೋ ನಡೆದರೆ ಅದೊಂದು ದೊಡ್ಡ ವಿಪರೀತವೇನಲ್ಲ. ನೀವು ಕಡ್ಡಿಯಷ್ಟನ್ನು ಗುಡ್ಡದಷ್ಟಾಗಿ ಮಾಡಿ ಹೇಳುವಿರಿ, ಅಷ್ಟೇ ಹೊರತು ಮತ್ತೇನಿಲ್ಲ." ಎಂದನು.

"ಅದಲ್ಲ ಪ್ರಭೂ. ಹಾಡು ಹಗಲಲ್ಲೇ ದುಷ್ಟರು ಜನರನ್ನು ನಿಲ್ಲಿಸಿ ಬಲವಂತವಾಗಿ ಇದ್ದುದನ್ನೆಲ್ಲ ಎಳೆದುಕೊಂಡು ಹೋಗುತ್ತಿದ್ದಾರೆ. ಅಂಗಡಿಗಳಿಗೂ ನುಗ್ಗಿ ಕೊಳ್ಳೆ ಹೊಡೆಯುತ್ತಿದ್ದಾರೆ. ಇನ್ನು ರಾತ್ರಿಯ ಹೊತ್ತಿನಲ್ಲಿ ಮನೆಗಳಿಗೆ ಕನ್ನ ಕೊರೆಯುವುದಂತೂ ಸರ್ವೇ ಸಾಮಾನ್ಯವಾಯಿತು. ಹೀಗೆ ಪ್ರತಿ ನಿಮಿಷವೂ ನಮಗೆ ಭಯವೇ." ಎಂದರು ಪೌರರು.

ಈಗ ಪುರಂಧರನು ಹೆಚ್ಚಿನ ಕೋಪ ತಂದುಕೊಂಡು "ಇದು ನಂಬಲು ಸಾಧ್ಯವಿಲ್ಲದ ಸಂಗತಿ.

ಕಮಲಿನಿ



ಇದು ನಿಜವಾದರೆ ನನ್ನ ವಿರೋಧಿಗಳಾರೋ ಮಹಾರಾಜರಿಗೆ ನನ್ನ ಮೇಲೆ ದುರಭಿಪ್ರಾಯ ಹುಟ್ಟಲು ಮಾಡುತ್ತಿರುವ ಸಂಚು !" ಎಂದನು.

ರಾಜಪ್ರತಿನಿಧಿಗೆ ಅಷ್ಟು ಜೋರಾಗಿ ಕೋಪ ಬರುವುದನ್ನು ನೋಡಿ, ಆ ಪೌರರು ಹೆದರಿ ಅಲ್ಲಿಂದ ಮೆಲ್ಲನೆ ಜಾರಿಕೊಂಡರು.

ಆಮೇಲೆ ಪುರಂಧರನ ಸಲಹಾದಾರರಲ್ಲಿ ಒಬ್ಬನಾದ ನಾಗವರ್ಮನು "ಪ್ರಭೂ, ನೀವು ಸ್ವಲ್ಪ ಶಾಂತತೆಯನ್ನು ತಂದುಕೊಂಡು ಆಲೋಚಿಸಬೇಕು. ಇವರು ಸಂಚುಗಾರರಾದರೆ ನಿಮ್ಮೊಡನೆ ಮುಖಾಮುಖಿಯಾಗಿ ಹೀಗೆ ಹೇಳುತ್ತಿರಲಿಲ್ಲ. ನಗರದೊಳಗೆಲ್ಲಾ ಸರಿಯಾಗಿಯೇ ಇದೆ ಎಂಬ ಭ್ರಾಂತಿಯಿಂದ ನಾವಿದ್ದೇವೇನೋ ಎಂದು ನನಗೆ ಅನುಮಾನವಾಗುತ್ತದೆ. ಈ ಮೊದಲು ಶಾಂತಿ ಭದ್ರತೆಗಳನ್ನು ಸ್ಥಾಪಿಸುವುದರಲ್ಲಿ ನಾವು ಸಾಧಿಸಿದ ವಿಜಯವು, ಬಹುಶಃ ಈಗ ನಮಗೆ ಬಂದ ಉದಾಸೀನತೆಗೆ ಕಾರಣವಾಗಿರಬಹುದು. ವಿಚಾರಿಸಿ ನೋಡಲು ತಕ್ಕ ಕ್ರಮವನ್ನು ಕೈಕೊಳ್ಳುವುದು ಒಳ್ಳೆಯದು" ಎಂದನು.

ಪುರಂಧರನು ಕೆಲವು ಕ್ಷಣ ಆಲೋಚಿಸುತ್ತ ಸುಮ್ಮನಿದ್ದು, "ನಾನು ನನ್ನ ಸಾಮರ್ಥ್ಯದಲ್ಲಿ ಗಟ್ಟಿ ನಂಬಿಗೆ ಇಟ್ಟುಕೊಂಡಿರುವವನು. ಭ್ರಾಂತಿಗೋ, ಅಪೋಹಗಳಿಗೋ ತಲೆಬಾಗಲಾರೆನು" ಎಂದನು.

ನಾಗವರ್ಮನು ಮತ್ತೇನೂ ಮಾತಾಡಲಿಲ್ಲ.

ಒಂದು ವಾರವು ಕಳೆದ ಮೇಲೆ ಒಂದು ದಿನ ರಾತ್ರಿ ಪುರಂಧರನು, ನಗರದಲ್ಲಿ ಧನಿಕ ವರ್ತಕನಾದ ಉಪಗುಪ್ತನ ಮನೆಯಲ್ಲಿ ನಡೆಯುವ ಔತಣಕೂಟಕ್ಕೆ ಹೋಗಬೇಕಾಗಿ ಬಂದಿತು. ಔತಣದ ಊಟೋಪಚಾರಗಳೆಲ್ಲ ಮುಗಿದು ಹೊರಡಲೆದ್ದಾಗ ರಾತ್ರಿಯ ಎರಡು ಜಾಮಗಳು ಕಳೆದು ಹೋಗಿದ್ದುವು. ಭುಕ್ತಾಯಾಸದಿಂದಿರುವ ಪುರಂಧರನಿಗೆ, ಬೀದಿಯಲ್ಲಿ ಕಾಲಾಡಿಸುತ್ತಾ ನಡೆದು ಮನೆಗೆ ಹೋಗುವುದೇ ಒಳ್ಳೆಯದೆಂದು ತೋರಿತು. ಅದರಿಂದ ರಾತ್ರಿಯ ವೇಳೆಯಲ್ಲಿ ನಗರದ ಪರಿಸ್ಥಿತಿಗಳು ಹೇಗಿರುವುದೆಂದು ಕೂಡಾ ನೋಡಿಕೊಳ್ಳಬಹುದು.

ಈ ಆಲೋಚನೆಯಿಂದ ಪುರಂಧರನು ತನ್ನ ಪಲ್ಲಕಿಯನ್ನೂ ಬೋಯಿಗಳನ್ನೂ ಮನೆಗೆ ಹೋಗಿರೆಂದು ಕಳುಹಿಸಿಬಿಟ್ಟನು.

ಸಲಹಾದಾರ ನಾಗವರ್ಮ ಮತ್ತು ಪ್ರಧಾನ ಸೇವಕನೊಬ್ಬನನ್ನು ಕೂಡಾ ತನ್ನೊಂದಿಗೆ ಕರೆದುಕೊಂಡು ಅವನು ನಗರದ ಬೀದಿಯಲ್ಲಿ ನಡೆದು ಹೋಗತೊಡಗಿದನು.

ಒಂದು ಕಡೆಯಲ್ಲಿ ಥಕ್ಕನೆ ನಾಲ್ವರು ಮುಸುಗಿನ ಮನುಷ್ಯರು ಬಂದು ಪುರಂಧರನ ಮೇಲೆ ಕಲಿಬಿದ್ದರು. ಪುರಂಧರನು ಅವರನ್ನು ಇದಿರಿಸಿ ಗುದಮುರಿಗೆ ಹಾಕಿ ಹೊಡೆದು ಅವರನ್ನು ಓಡಿಸಿಬಿಟ್ಟನು. ಆದರೆ ಅಷ್ಟರೊಳಗೆ ತನ್ನ ಕೊರಳಿನಲ್ಲಿದ್ದ ಬೆಲೆಬಾಳುವ

ರತ್ನಹಾರವು ಮಾಯವಾಗಿ ಹೋಯಿತೆಂದು ಗೊತ್ತಾಗಿ, "ಅರರೇ!" ಎಂದು ಕೈ ಕುಣಿಸಿದನು.

ಕೂಡಲೇ ಅವನು ಸಲಹಾದಾರನನ್ನೂ, ಸೇವಕನನ್ನೂ ಎಚ್ಚರಿಸಿ, ಕಳ್ಳರು ಓಡಿದ ದಿಕ್ಕಿಗೆ ಓಡತೊಡಗಿದನು. ಒಂದು ಬೀದಿಯ ಬಳಸು ಜಾಗದಲ್ಲಿ, ಬೇಗಬೇಗನೇ ನಡೆದುಬರುವ ಒಬ್ಬ ಮನುಷ್ಯನನ್ನು ಪುರಂಧರನು ನೋಡಿದನು. ಅವನ ಕೊರಳಿನಲ್ಲಿ ಒಂದು ರತ್ನಹಾರವು ಹೊಳೆಯುತ್ತಿದ್ದಿತು. ಪುರಂಧರನನ್ನೂ, ಅವನ ಹಿಂದೆಯೇ ಓಡಿ ಬರುವವರನ್ನೂ ನೋಡಿ, ಆ ಮನುಷ್ಯನು ಗದಗದ ನಡುಗುತ್ತ ನಿಂತುಬಿಟ್ಟನು.

ಪುರಂಧರನು ಅವನ ಹತ್ತಿರ ಹೋಗಿ ಜೋರಾಗಿ ಗದರಿಸುವ ದನಿಯಿಂದ, "ಸಿಕ್ಕಿದೆಯಾ ಕಳ್ಳ ಕೊರಮಾ! ಮೊದಲು ರತ್ನಹಾರ ತೆಗೆದುಕೊಡುವಿಯೋ ಇಲ್ಲವೊ!" ಎಂದನು.

ಆ ಮನುಷ್ಯನು ಹಾರವನ್ನು ತೆಗೆದು ಪುರಂಧರನ ಕೈಗೆ ಹಾಕಿ, ಹಿಂದಿರುಗಿ ಹಾರಿ ಓಡಿಹೋಗಿಬಿಟ್ಟನು.

ಅದೇ ಹೊತ್ತಿಗೆ ಅಲ್ಲಿಗೆ ಬಂದ ಪುರಂಧರನ ಪ್ರಧಾನ ಸೇವಕನು. "ಇದೇನು ಅಯ್ಯಾ, ನ್ಯಾಯವನ್ನು ಕಾಪಾಡಬೇಕಾದ ತಾವೇ ಯಾರದೋ ರತ್ನಹಾರವನ್ನು ಹೆದರಿಸಿ ಎಳೆದುಕೊಂಡುದು ವಿಚಿತ್ರವಾಗೇ ಇದೆ! ಏನೆಂದುಕೊಂಡಿರೋ! ಈ ಸಂಗತಿ ನಗರದಲ್ಲಿ ಹಲವರಿಗೆ ಗೊತ್ತಾಗಿಬಿಟ್ಟರೆ ಬಹಳ ಗಡಿಬಿಡಿಯಾದೀತಷ್ಟೆ? ಏಕೆಂದರೆ ಅವನಿಗೆ ನೀವು ಯಾರೆಂದು ಗೊತ್ತಾಗಿಯೇ ಇದ್ದೀತು" ಎಂದನು.

ಸೇವಕನ ಮಾತುಗಳನ್ನು ಕೇಳಿ ಪುರಂಧರನು ಆಶ್ಚರ್ಯಪಡುತ್ತ, "ನಿನಗೆ ನಿಜ ಗೊತ್ತಾಗಲಿಲ್ಲ. ನಮ್ಮ ಅದೃಷ್ಟದಿಂದ ನಾವು ಹುಡುಕುವ ಕಳ್ಳನೇ ಈ ಸಂದುಗೊಂದು ಪ್ರದೇಶದಲ್ಲಿ ದಾರಿತಪ್ಪಿ ನನ್ನ ಕಡೆಗೇ ಬರುವುದನ್ನು ನೋಡಿದೆ. ಆ ಮೂವರು ಮುಸುಗಿನವರಲ್ಲಿ ಇವನೊಬ್ಬ! ಅವನಿಂದ ನನ್ನ ಹಾರವನ್ನು ತೆಗೆದುಕೊಂಡುದರಲ್ಲಿ ಅನ್ಯಾಯವೇನಿದೆ?" ಎಂದನು.



ಸೇವಕನು ವಿನಯದಿಂದ, "ಅಯ್ಯಾ, ತಾವು ಈ ದಿನ ಔತಣಕ್ಕೆ ಹೊರಡುವಾಗ ಹಾರವನ್ನು ಧರಿಸಿ ಕೊಳ್ಳಲಿಲ್ಲ. ಹಾರದಲ್ಲಿದ್ದ ನಾಲ್ಕು ರತ್ನಗಳು ಜಾರಿ ಹೋದುದರಿಂದ, ಅದನ್ನು ನೀವು ನನ್ನ ಕೈಗೆ ಕೊಟ್ಟು ಸ್ವರ್ಣಕಾರನಿಗೆ ಕೊಟ್ಟುಬರಲು ಹೇಳಿದ್ದೀರಿ" ಎಂದನು.

ಆ ಮಾತು ಕೇಳಿ ಪುರಂಧರನು ಮುಳ್ಳು ಚುಚ್ಚಿಸಿ ಕೊಂಡವನಂತೆ, "ಅರರೇ! ಹೌದಲ್ಲ! ಮತ್ತೆ ಹಾರ ಧರಿಸಿಕೊಂಡಿದ್ದ ಆ ಮನುಷ್ಯ ಸಿಕ್ಕಿಬಿದ್ದ ದೊಡ್ಡ ಕಳ್ಳನ ಹಾಗೆ ನಾನು ಕೇಳಿದ ಕೂಡಲೇ ಅದನ್ನು ನನ್ನ ಕೈಗೆ ಹಾಕಿ ಅಷ್ಟು ವೇಗದಿಂದ ಓಡಿ ಹೋಗಲು ಕಾರಣವೇನು?" ಎಂದನು.

ಆಗ ಸಲಹಾದಾರ ನಾಗವರ್ಮನು ಸಣ್ಣಗೆ ನಕ್ಕು, "ರತ್ನಹಾರ ಧರಿಸಿಕೊಂಡು ಎಲ್ಲಿಗೋ ಹೋಗುತ್ತಿದ್ದ ದೊಡ್ಡ ಮನುಷ್ಯನನ್ನು ನೀವು ಕಳ್ಳನೆಂದು ಭ್ರಮಿಸಿದಿರಿ. ಅವನೂ ಇಂತಹ ನಡುರಾತ್ರಿಯಲ್ಲಿ ನಮ್ಮನ್ನು ನೋಡಿ ಕಳ್ಳರೆಂದುಕೊಂಡು ಹೆದರಿ ಪ್ರಾಣ ಭಯದಿಂದ ತೆಗೆದುಕೊಟ್ಟು ಓಡಿಹೋದನು ಪಾಪ!" ಎಂದನು.

"ಹಾಗೇ ಆಗಿರಬೇಕು!" ಎಂದು ಪುರಂಧರನು ಆ ಮನುಷ್ಯನು ಓಡಿದ ದಿಕ್ಕನ್ನು ನೋಡಿದನು.

"ಅವನು ಇಷ್ಟು ಹೊತ್ತಿಗೆ ಮನೆ ಸೇರಿರಬಹುದು. ಆದರೆ ಒಂದು, ನಿಮ್ಮನ್ನು ದೋಚಿಕೊಳ್ಳಲು ಕಳ್ಳರು ಮಾಡಿದ ಈ ಒಂದು ಪ್ರಯತ್ನವೇ ನಿಮಗೆ ನಿಮ್ಮದು ಯಾವುದೋ ಒಂದು ವಸ್ತು ಹೋಯಿತೆಂದೂ, ಸುತ್ತಲಿರುವವರೆಲ್ಲಾ ಕಳ್ಳರೆಂದೂ ಭ್ರಾಂತಿಯುಂಟಾಯಿತು. ಕಳ್ಳರ ಕಾಟವನ್ನು ಊಹಿಸಿಕೊಂಡು ನಿಮ್ಮಂಥವರ ಮನಸ್ಸೇ ಹೀಗಾದ ಮೇಲೆ ಇನ್ನು ಸಾಮಾನ್ಯ ಜನರ ಮಾತೇನು?" ಎಂದನು ನಾಗವರ್ಮ.

ಪುರಂಧರನು ನಾಗವರ್ಮನ ಮಾತುಗಳನ್ನು ಮೌನವಾಗಿಯೇ ಕೇಳಿದನು. ನಗರದಲ್ಲಿ ಶಾಂತಿ ಭದ್ರತೆಗಳು ಸರಿಯಾಗಿಯೇ ಇವೆ ಎಂಬ ಭ್ರಾಂತಿ ಈಗ ಅವನನ್ನು ಬಿಟ್ಟುಹೋಗಿ ಎಚ್ಚರಿಕೆಯಾಗಿತ್ತು. ಚಿಂತಿಸುತ್ತಾ ಮನೆಗೆ ಹೋದನು. ಮರು ದಿನ ಅವನು ನಗರದಲ್ಲಿ ರತ್ನಹಾರದ ಸಂಗತಿಯನ್ನು ಡಂಗುರ ಸಾರಿಸಿ. ಅದರ ಯಜಮಾನನಿಗೆ ಅದು ಸಿಕ್ಕುವ ಹಾಗೆ ಮಾಡಿದನು.

ಆಮೇಲೆ ಪುರಂಧರನು ನಗರವಾಸಿಗಳಿಗೆ ಕಳ್ಳರ ಕಾಟ ಇಲ್ಲದಂತೆ ಮಾಡಲು ಅನೇಕ ಬಂದೋಬಸ್ತುಗಳ ಏರ್ಪಾಡನ್ನೂ, ಅಜ್ಞೆಗಳನ್ನೂ ಹೊರಡಿಸಿ, ಬೇಗದಲ್ಲೇ ಸಮರ್ಥನಾದ ರಾಜಪ್ರತಿನಿಧಿ ಎನಿಸಿಕೊಂಡನು.





# ಪಾಪಪರಿಹಾರ

ಒಂದು ಊರಿನಲ್ಲಿ ಆನಂದನೆಂಬೊಬ್ಬ ಹುಡುಗನಿದ್ದನು. ಆರು ವಯಸ್ಸಿನ ಆ ಹುಡುಗನಿಗೆ ತಂಟೆ ಪೋಕರಿತನಗಳೆಂದರೆ ಬಹಳ ಇಷ್ಟ. ಅವನು ತುಂಟತನಗಳನ್ನು ತನ್ನ ಈಡುಜೋಡಿನ ಹುಡುಗರೊಂದಿಗೆ ತೋರಿಸುತ್ತಿದ್ದರೆ ಏನೋ ಆಟ ಎನ್ನಬಹುದಿತ್ತು. ಆದರೆ ಅವನು ತೋರಿಸುವ ಕುಶಾಲಿನ ಹಿಂಸೆಗಳು ಮೂಕಪ್ರಾಣಿಗಳ ಮೇಲೆಯೇ.

ಹೀಗೆ ಅವನ ಕಾಟಕ್ಕೆ ಒಳಗಾದ ಪ್ರಾಣಿ ಒಂದು ನಾಯಿಮರಿ. ಅದು ಸೊರಕಲಾಗಿ ತುಂಬ ಬಲಹೀನವಾಗಿದ್ದಿತು. ಕೇಳುವವರಿಲ್ಲದ ಬೀದಿನಾಯಿಯಾಗಿದ್ದ ಅದು ತಿಂಡಿಗಾಗಿ ಉಳಿದ ನಾಯಿಗಳೊಂದಿಗೆ ಸ್ಪರ್ಧಿಸಲಾಗದೆ ಹಸಿವೆಯಿಂದ ಕುಯಿಂಗುಟ್ಟಿಕೊಂಡಿದ್ದಿತು. ಆನಂದನ ತಂದೆ ಆ ನಾಯಿಮರಿಯ ನರಳಾಟ ನೋಡಿ ಮನಸ್ಸು ಕರಗಿ, ಮನೆಗೆ ತಂದು ಎರಡು ಹೊತ್ತು ತಿಂಡಿ ಕೊಡುತ್ತಿದ್ದನು. ಆ ಸಮಯದಲ್ಲೇ ಆನಂದನು ಅದಕ್ಕೆ ಕಾಟಕೊಡಲು ಪ್ರಾರಂಭಿಸುವನು.

ಅವನು ನಾಯಿಯ ಮುಂದಿದ್ದ ಅನ್ನದ ಬಟ್ಟಲನ್ನು ಎತ್ತಿಕೊಂಡು ಎತ್ತರದಲ್ಲಿಟ್ಟು ಬಿಡುವನು. ಅದು ಹಸಿವೆಯಿಂದ ಕುಂಯ್ಯೋ, ಮುಂಯೋ ಎಂದು ಅಳುಬೊಗಳು ಹೊರಡಿಸುತ್ತಿತ್ತು. ಸ್ವಲ್ಪಹೊತ್ತು ಅದನ್ನು ಹಾಗೆ ಬೊಗಳಲು ಬಿಟ್ಟು ಆಮೇಲೆ ಅನ್ನದ ಬಟ್ಟಲನ್ನು ಅದರ ಮುಂದೆ ಇಡುವನು. ಅಷ್ಟು ಮಾತ್ರಕ್ಕೇ ಆ ನಾಯಿಮರಿ ಬಹಳ ವಿಶ್ವಾಸದಿಂದ ಬಾಲವಾಡಿಸುತ್ತ, ಅವನ ಸುತ್ತಲೂ ತಿರುಗುತ್ತಿತ್ತು.

ಒಂದೊಂದು ಸಾರಿ ಆನಂದನು ನಾಯಿಮರಿಯನ್ನು ಮನೆಯ ಹಿಂಬದಿಗೆ ತೆಗೆದುಕೊಂಡು ಹೋಗಿ ಯಾವ ಮರದ ಕೊಂಬೆಯ ಮೇಲೆಯೋ ಇಟ್ಟುಬಿಡುವನು. ಅದು ಭೀತಿಯಿಂದ ಗಡಗಡ ನಡುಗುತ್ತ ಕಿರಿಚುತ್ತಿದ್ದರೆ, ಆನಂದನು ಸಂತೋಷದಿಂದ ಚಪ್ಪಾಳೆ ತಟ್ಟಿ ನಲಿಯುವನು.

ಆನಂದನ ತಂದೆ ಅದನ್ನು ನೋಡಿದಾಗಲೆಲ್ಲ ಹಾಗೆ ಮಾಡುವುದು ತಪ್ಪು ಎಂದು ಬುದ್ಧಿ ಹೇಳುತ್ತಾ ಇರುವನು. ಆದರೂ ಆನಂದನು ನಾಯಿಮರಿಯನ್ನು ಬಗೆ ಬಗೆಯಾಗಿ ಹಿಂಸಿಸಿ ಆನಂದಿಸುವುದನ್ನು ಬಿಡಲೇ ಇಲ್ಲ.

ಹೀಗೆ ಬೆಳೆಯುತ್ತ ಆನಂದನು ದೊಡ್ಡವನಾದನು. ಆಟದ ಬುದ್ಧಿಯವನಾದ ಅವನಿಗೆ ಓದುಬರೆಹ

ಜೆ. ಆರ್. ಲಕ್ಷ್ಮಿ



ಸರಿಯಾಗಿ ಹತ್ತಿಕೊಳ್ಳಲಿಲ್ಲ. ಊರಲ್ಲಿ ಕೆಲವು ವರ್ಷಗಳಿಂದ ಅತಿವೃಷ್ಟಿ, ಅನಾವೃಷ್ಟಿಗಳಿಂದಾಗಿ ಪೈರು ಸರಿಯಾಗಿ ಬೆಳೆಯದೆ ಜನರಿಗೆಲ್ಲಾ ಕಷ್ಟ ಬಂದಿತು.

ಹಾಗೆಯೇ ಆನಂದನ ಮನೆಯವರಿಗೂ ಬಡತನ ಬಂದಿತು. ದೊಡ್ಡವನಾದ ಆನಂದನು ಹೊಟ್ಟೆಯ ಪಾಡು ನೋಡಿಕೊಳ್ಳಲಿಕ್ಕಾಗಿ ಪಟ್ಟಣಕ್ಕೆ ಹೋದನು. ಅಲ್ಲಿ ಒಬ್ಬ ಶ್ರೀಮಂತನ ಮನೆಯಲ್ಲಿ ಆಳಾಗಿ ದುಡಿಯುವ ಕೆಲಸ ಅವನಿಗೆ ಸಿಕ್ಕಿತು. ಶ್ರೀಮಂತನು ಅವನಿಗೆ ಎರಡು ಹೊತ್ತು ಊಟ ಹಾಕಿ ತಿಂಗಳಿಗೆ ಇಪ್ಪತ್ತೈದು ವರಹಗಳನ್ನು ಸಂಬಳವಾಗಿ ಕೊಡುತ್ತಿದ್ದನು. ನಿಜಕ್ಕೂ ಶ್ರೀಮಂತನು ಧರ್ಮಗುಣ ಉಳ್ಳವನು. ಆಳುಕಾಳುಗಳನ್ನು ಅವನಷ್ಟು ಚೆನ್ನಾಗಿ ನೋಡಿಕೊಳ್ಳುವವರು ಪಟ್ಟಣದಲ್ಲಿ ಬೇರೆ ಯಾವ ಧನಿಕರೂ ಇರಲಿಲ್ಲ.

ಆ ಶ್ರೀಮಂತನಿಗೆ ಶೇಖರನೆಂಬ ಹತ್ತು ವಯಸ್ಸಿನ ಮಗನಿದ್ದನು. ಅವನಿಗೆ ಆನಂದನೆಂದರೆ ಬಹಳ ಇಷ್ಟ. ಅವನು ಯಾವಾಗಲೂ ಆನಂದನ ಸುತ್ತಲೂ ಬಟ್ಟವಿಡುತ್ತ, ಕಥೆ ಹೇಳುವಂತೆ ಒತ್ತಾಯಿಸಿಕೊಂಡೇ ಇರುವವನು. ಆನಂದನಿಗೆ ಏನೇನೋ ಕಥೆಗಳು ಗೊತ್ತಿದ್ದುವು. ಕೆಲವು ಸಾರಿ ಮಾಡುವ ಕೆಲಸ ಬಿಟ್ಟು ಕೂಡಾ ಅವನಿಗೆ ಕಥೆ ಹೇಳುತ್ತಾ ಕೂಡುವನು. ಆದರಿಂದ ಶ್ರೀಮಂತನಿಂದ ಬೈಗುಳನ್ನೂ ತಿನ್ನ ಬೇಕಾಗುತ್ತಿತ್ತು.

ಹೀಗೆ ದಿನಗಳು ಸಾಗುತ್ತಿರಲು ಒಂದು ದಿನ ಶ್ರೀಮಂತನು ಆನಂದನನ್ನು ಕರೆದು, "ನೀನು ಮನಸ್ಸಿಟ್ಟು ಕೆಲಸ ಮಾಡುವವನಾಗಿ ಕಾಣುವುದಿಲ್ಲ. ಕೆಲಸದಲ್ಲಿ ಶ್ರದ್ಧೆ ಇಲ್ಲ. ಹೀಗಿದ್ದರೆ ನೀನು ಕೆಲಸ ಬಿಟ್ಟು ಹೋಗಬೇಕಾಗಿ ಬರುತ್ತೆ. ನೆನಪಿರಲಿ" ಎಂದು ಎಚ್ಚರಿಕೆ ಕೊಟ್ಟನು.

ಆಗ ಆನಂದನು ನಿಜವಾದ ಕಾರಣವನ್ನು ಯಜಮಾನನೊಂದಿಗೆ ಹೇಳಬೇಕಾಗಿ ಬಂತು. ಶ್ರೀಮಂತನು ತನ್ನ ಮಗನನ್ನು ಕರೆದು ಕೋಪದಿಂದ, ಆನಂದನು ಕೆಲಸ ಮಾಡುವಾಗ ಪೀಡಿಸಬಾರದೆಂದು ಬುದ್ಧಿ ಹೇಳಿದನು.

ಹೀಗೆ ಆನಂದನು ತನಗೆ ತಂದೆಯಿಂದ ಬೈಗುಳು ತಿನ್ನಿಸಿದನೆಂದು ಶೇಖರನಿಗೆ ಆನಂದನ ಮೇಲೆ ಕೋಪ ಉಂಟಾಯಿತು. ಆಗಿನಿಂದ ಅವನು ಆನಂದನು ಕೆಲಸದಲ್ಲಿರುವಾಗ ಮಾತಾಡಿಸುವುದನ್ನು ಬಿಟ್ಟನು. ಕೆಲಸಮಾಡಿ ಬಳಲಿ ಆನಂದನು ಆಯಾಸ ತೀರಿಸಿಕೊಳ್ಳಲು ಕುಳಿತರೆ, ಬೇಡದ ತುಂಟ ಕೆಲಸಗಳನ್ನು ಮಾಡಿ, ಅವನನ್ನು ನೋಯಿಸುತ್ತಿದ್ದನು.

ಒಂದು ದಿನ ಚಳಿ ಬಹು ಜೋರಾಗಿತ್ತು. ಶೇಖರನು ಹೊಸ ಬಟ್ಟೆಗಳೊಂದಿಗೆ ಆನಂದನ ಹತ್ತಿರ ಬಂದು, "ಈ ಬಟ್ಟೆಗಳು ನಿನಗಾಗಿ ಅಪ್ಪ ತರಿಸಿದ್ದು. ಚಳಿಗೆ ಬಹಳ ಚೆನ್ನಾಗಿರುತ್ತವೆ. ನಿನ್ನ ಹಳೇ ದುಸ್ತುಗಳನ್ನೆಲ್ಲ ತೆಗೆದುಹಾಕಿಬಿಡು, ಇವುಗಳನ್ನು ಕೊಡುತ್ತೇನೆ" ಎಂದನು.



ಆ ಮಾತನ್ನು ನಂಬಿ ಆನಂದನು ತನ್ನ ಅಂಗಿ ಬಟ್ಟೆಗಳನ್ನು ಬಿಚ್ಚಿ ಸಣ್ಣ ಬೈರಾಸನ್ನು ಕಟ್ಟಿಕೊಂಡು ನಿಂತನು.

ಆ ಶ್ರೀಮಂತನ ಮನೆಯಲ್ಲಿ ಒಂದು ಬೇಟೆ ನಾಯಿ ಇದ್ದಿತು. ಶೇಖರನು ಸಿಳ್ಳು ಹಾಕಿದರೆ ಅದು ಓಡಿಬರುತ್ತಿತ್ತು. ಅವನು ಸಿಳ್ಳು ಹಾಕಿ, "ಬೇಗ ಓಡಿಬಿಡು ! ಇಲ್ಲದಿದ್ದರೆ ನಾಯಿ ನಿನ್ನನ್ನು ಸೀಳಿಹಾಕುತ್ತದೆ !" ಎಂದನು.

ಆನಂದನು ಭಯದಿಂದ ಹೊರಗೆ ಓಡಿದನು. ಬೇಟೆನಾಯಿ ಅವನನ್ನು ಓಡಿಸಿಕೊಂಡು ಹೋಯಿತು. ಹೀಗೆ ಮೈ ಕೊರೆಯುವ ಚಳಿಯಲ್ಲಿ ಎರಡು ಮೂರು ನಿಮಿಷಗಳವರೆಗೆ ಆನಂದನು ನಾಯಿಗೆ ಸಿಕ್ಕದಂತೆ ಓಡಿದ ಮೇಲೆ, ಶೇಖರನು ನಾಯಿಯನ್ನು ಹಿಂದಕ್ಕೆ ಕರೆದುಕೊಂಡನು. ಆಮೇಲೆ ಮನೆಗೆ ಬಂದ ಆನಂದನಿಗೆ ಹೊಸ ಬಟ್ಟೆಗಳನ್ನು ಕೊಟ್ಟು "ಪಾಪ ! ಬಹಳ ಹೆದರಿದಿ ಹೌದಾ ? ಇವುಗಳನ್ನು ಉಟ್ಟುಕೋ" ಎಂದನು ಗೇಲಿಯ ನಗುವಿನೊಂದಿಗೆ.

ಆ ಬಟ್ಟೆಗಳು ನೀರಿನಲ್ಲಿ ನೆನೆದು ಒದ್ದೆಯಾಗಿದ್ದುವು. ಆನಂದನು ಅವುಗಳನ್ನು ಬಿಸಿಲಿಗೆ ಆರಹಾಕಿ ಧರಿಸಿಕೊಂಡನು. ಇಂತಹ ಶೇಖರನನ್ನು ಕುರಿತು ಯಜಮಾನರೊಂದಿಗೆ ಫಿರ್ಯಾದಿ ಮಾಡಲೋ ಬೇಡವೋ ಎಂದು ಯೋಚಿಸುತ್ತಾ ಇದ್ದನು. ರಾತ್ರಿ ಸರಿಯಾಗಿ ನಿದ್ದೆಯೂ ಬರಲಿಲ್ಲ. ಮರುದಿನ ಬೆಳಿಗ್ಗೆ ಆನಂದನು ಶ್ರೀಮಂತನೊಡನೆ ಶೇಖರನ ಮೇಲೆ ದೂರು ಹೇಳಲು ಹೋದನು.

ಆ ಸಮಯದಲ್ಲಿ ಮತ್ತೊಬ್ಬ ನೌಕರನು ಶೇಖರನ ತುಂಟತನವನ್ನು ಕುರಿತು ಶ್ರೀಮಂತನೊಂದಿಗೆ ಹೇಳಿಕೊಂಡಿದ್ದನು. ಅದನ್ನೆಲ್ಲಾ ಕೇಳಿ ಶ್ರೀಮಂತನು, "ನನ್ನ ಮಗನಾದರೇನಾಯಿತು ? ನಿನ್ನ ಕೆಲಸದಲ್ಲಿ ಅವನು ಅಡ್ಡ ಬಂದರೆ ನಾನು ಸಹಿಸಲಾರೆ. ಆದರೆ ಬೇರೆ ಸಮಯದಲ್ಲಿ ಅವನು ಏನು ಮಾಡಿದರೂ ನೀನು ತಾಳಿಕೊಳ್ಳಬೇಕು. ಪ್ರತಿಯೊಂದಕ್ಕೂ ಅವನ ಮೇಲೆ ದೂರು ತರುವುದು ಒಳ್ಳೆಯದಲ್ಲ, ಬಿಡು. ನಾನೂ ಹೇಳುತ್ತೇನೆಂದುಕೋ. ಈಗ ಹೋಗು" ಎಂದನು.

ಈ ಮಾತುಗಳನ್ನು ಕೇಳಿಸಿಕೊಂಡ ಆನಂದನು ಯಜಮಾನನೊಂದಿಗೆ ಏನೂ ಹೇಳದೆ, ಹಿಂದಿರುಗಿ ಹೋದನು.

ಶ್ರೀಮಂತನ ಹತ್ತಿರ ಅನೇಕ ಮಂದಿ ನೌಕರರಿದ್ದರು. ಆದರೆ ಶೇಖರನು ಆನಂದನನ್ನೇ ಹೆಚ್ಚಾಗಿ ಪೀಡಿಸುತ್ತಿದ್ದನು. ಅದನ್ನು ನೋಡಿ ಉಳಿದ ನೌಕರರು ಕೂಡಾ ಕರಗಿ ಹೋಗುತ್ತಿದ್ದರು. ಅವರಲ್ಲಿ ಒಬ್ಬನು ಬಹಳ ಆಲೋಚನೆ ಮಾಡಿ, ಎಲ್ಲಿಂದಲೋ ಒಂದು ಚೆಲುವಾದ ನಾಯಿಮರಿಯನ್ನು ತಂದು ಶೇಖರನಿಗೆ ಕೊಟ್ಟನು.

ತನ್ನ ಜತೆಯ ಆಳು ಮಾಡಿದ ಈ ಕೆಲಸ ನೋಡಿ ಆನಂದನು ಆಶ್ಚರ್ಯಪಡುತ್ತ, "ನಾಯಿ



ಮರಿಯನ್ನು ತಂದು ಅವನಿಗೇಕೆ ಕೊಟ್ಟೆ? ಆ ತುಂಟ ಅದನ್ನು ಬದುಕಲು ಬಿಡುವನೇ?" ಎಂದು ಕೇಳಿದನು.

"ಈಗ ಶೇಖರನಿಗೆ ಆಟವಾಡಲು ನಾಯಿಮರಿ ಸಿಕ್ಕಿತೋ ಇಲ್ಲವೊ? ಇನ್ನು ನಿನ್ನ ತಂಟೆಗೆ ಬರುವುದಿಲ್ಲ" ಎಂದನು ಆ ಗೆಳೆಯ ನೌಕರ.

ಆ ಮಾತನ್ನು ಕೇಳಿ ಆನಂದನಿಗೆ ತನ್ನ ಚಿಕ್ಕಂದಿನ ಸಂಗತಿ ನೆನಪಿಗೆ ಬಂದಿತು. ತಾನು ನಾಯಿಮರಿಗೆ ಕಾಟಕೊಟ್ಟುದರಿಂದಲೇ ಆ ಪಾಪದ ಫಲವನ್ನು ಈಗ ಅನುಭವಿಸುವುದಾಗಿ ತಿಳಿದನು. ಮನುಷ್ಯರಿಗೆ ಕಾಟ ಕೊಡುವ ತುಂಟ ಶ್ರೀಮಂತ ಪುತ್ರ ಶೇಖರನಿಗೆ ನಾಯಿಮರಿ ಸಿಕ್ಕಿದರೆ ಕೇಳಬೇಕೆ? ಇನ್ನೆಷ್ಟು ಬಾಧಿಸುವನು.

ತಾನು ಕಷ್ಟಪಟ್ಟರೂ ಪರವಾಗಿಲ್ಲ. ಪಾಪದ ಆ ನಾಯಿಮರಿಯ ಹಿಂಸೆಗಳನ್ನು ತಪ್ಪಿಸಿದರೇನೇ ತನ್ನ ಪಾಪಕ್ಕೆ ಪ್ರಾಯಶ್ಚಿತ್ತವೆಂದು ಆನಂದನಿಗೆ ತೋರತೊಡಗಿತು.

ಹೀಗಂದುಕೊಂಡು ಆನಂದನು ಶೇಖರನ ಬಳಿಗೆ ಹೋದನು. ಆಗ ಶೇಖರನು ಬೇಟೆನಾಯಿಯನ್ನು ಕೆರಳಿಸುತ್ತ, ನಾಯಿಮರಿಯನ್ನು ಹೆದರಿಸುವ ಸಂಭ್ರಮದಲ್ಲಿದ್ದನು. ಬೇಟೆನಾಯಿಯ ಭಯಂಕರ ಬೊಗಳಿಕೆಗೆ ಆ ನಾಯಿಮರಿ ಕಾಂಯಿ ಕೋಂಯಿ ಎಂದು ಕಿರಿಚುತ್ತ ನರಳುತ್ತಿತ್ತು.

ಆನಂದನು ಶೇಖರನನ್ನು ನೋಡಿ "ನೋಡಿರಪ್ಪಾ, ನಿಮಗೆ ಹೀಗೆಲ್ಲಾ ಕಿರಿಚಾಟದ ಕುಶಾಲು ಬೇಕಾಗಿದ್ದರೆ ನಾನಿದ್ದೇನೆ. ನನಗೆ ಕಾಟ ಕೊಡಿರಿ. ಬಾಯಿ ಬಾರದ ಪುಟ್ಟ ನಾಯಿಮರಿಯನ್ನು ಮಾತ್ರ ಕಾಡಿಸಬೇಡಿ!" ಎಂದನು ಕೋಪದಿಂದ.

"ನಿನ್ನನ್ನು ಯಾರು ಕರೆದರು? ದೊಡ್ಡ ಇವನ ಹಾಗೆ ಬುದ್ಧಿ ಹೇಳುತ್ತೀಯಾ? ಹೋಗಾಚೆ!" ಎಂದನು ಶೇಖರ ಜೋರಿನಿಂದ.

"ಆ ನಾಯಿಮರೀನ ಈಚೆಗೆ ಬಿಡುವಿರೋ ಇಲ್ಲವೋ?" ಎನ್ನುತ್ತ ಆನಂದನು ಶೇಖರನ ಕೈಯನ್ನು ಹಿಡಿದುಕೊಂಡನು.

"ಬಿಡದಿದ್ದರೆ ಏನು ಮಾಡುತ್ತೀ?" ಎಂದನು ಶೇಖರ ಕಣ್ಣು ಅಗಲಿಸಿ.

ಆನಂದನು ಶೇಖರನ ದವಡೆಯ ಮೇಲೆ ಗಟ್ಟಿಯಾಗಿ ಒಂದು ಕೊಟ್ಟು, ನಾಯಿಮರಿಯನ್ನು ಎತ್ತಿಕೊಂಡು ಹೋಗಿಬಿಟ್ಟನು.

ಶೇಖರನು ಅಳುತ್ತಾ ತಂದೆಯ ಬಳಿಗೆ ಹೋಗಿ ನಡೆದ ಸಮಾಚಾರವನ್ನು ಹೇಳಿದನು. ಒಬ್ಬ ಸಾಮಾನ್ಯ ಕೆಲಸದ ಆಳು ತನ್ನ ಮಗನನ್ನು ಹೊಡೆಯುವುದೇ ಎಂಬ ರೋಷದಲ್ಲಿ ಶ್ರೀಮಂತನು ಉರಿದು ಬಿದ್ದು, ಆನಂದನನ್ನು ಕರೆದು, ಏಕೆ ಹೀಗೆ ಮಾಡಿದೆ ಎಂದು ಗದರಿಸಿ ಕೇಳಿದನು.

"ಅಯ್ಯಾ, ಆ ನಾಯಿಮರಿ ಈ ಸಣ್ಣ ಯಜಮಾನರ ಕೈಯಲ್ಲಿ ನಾನಾ ಯಾತನೆ ಅನುಭವಿಸಿಕೊಂಡು ಒದ್ದಾಡುತ್ತಿತ್ತು. ನನ್ನಿಂದ ಸಹಿಸಲಾಗದೆ ಹೋಯಿತು.

ಅದನ್ನು ಕಾಪಾಡಲಿಕ್ಕೇ ಹಾಗೆ ಮಾಡಿದೆ" ಎಂದು ಆನಂದನು ಧೈರ್ಯದಿಂದ ಹೇಳಿದನು.

ಶ್ರೀಮಂತನು ಅವನ ಧೈರ್ಯವನ್ನು ನೋಡಿ ಆಶ್ಚರ್ಯಪಡುತ್ತ, "ನನ್ನ ಮಗನಿಗೆ ಇಷ್ಟವಾದ ನಾಯಿಮರಿಯ ಮೇಲೆ ನಿನಗೇಕೆ ಅಷ್ಟು ಪ್ರೀತಿ ಬಂತು ?" ಎಂದು ಕೇಳಿದನು.

ಆಗ ಆನಂದನು ತಾನು ಚಿಕ್ಕಂದಿನಲ್ಲಿ ಮಾಡಿದುದನ್ನೆಲ್ಲಾ ಅವನೊಂದಿಗೆ ಹೇಳಿ, "ಹಾಗೆ ನಾನು ಚಿಕ್ಕತನದಲ್ಲಿ ಪಾಪ ಮಾಡಿದುದರಿಂದ ಅದಕ್ಕೆ ಪರಿಹಾರ ಮಾಡಿಕೊಳ್ಳಲು ಈ ನಾಯಿಯ ಮರಿಯನ್ನು, ನನ್ನ ಸಣ್ಣ ತಮ್ಮನ ಹಾಗೆ ಕಾಪಾಡೋಣವೆಂದು ತೋರುತ್ತದೆ. ಹಾಗೆ ಮಾಡಿದರೇನೇ ನನ್ನ ಬದುಕು ಕೂಡಾ ಒಳ್ಳೇದಾದೀತು ಅಂತ ನಂಬುತ್ತೇನೆ" ಎಂದನು.

ಶ್ರೀಮಂತನು ಶಾಂತನಾಗಿ ಮೆಚ್ಚು ಹೃದಯದಿಂದ ಆನಂದನಿಗೆ ನೂರು ವರಹಗಳನ್ನು ಬಹುಮಾನವಾಗಿ ಕೊಟ್ಟು, "ಆ ನಾಯಿಮರಿಯನ್ನು ನಿನ್ನ ಹತ್ತಿರವೇ ಇಟ್ಟುಕೋ. ಇನ್ನು ಮೇಲೆ ಶೇಖರನಿಂದ ನಿನಗೇನಾದರೂ ಉಪದ್ರವ ಬಂದರೆ ನನಗೆ ಹೇಳು" ಎಂದನು.

ಇದನ್ನು ತಿಳಿದು ಶ್ರೀಮಂತನ ಹೆಂಡತಿ "ನೀವು ಹೀಗೆ ಮಾಡಿ ನಮ್ಮ ಶೇಖರನನ್ನು ಕೆಲಸದಾಳಿಗಿಂತ ಕಡೆ ಮಾಡಿಬಿಟ್ಟಿರಿ" ಎಂದಳು ಕೋಪದಿಂದ.

"ಹುಚ್ಚಳೇ! ಚಿಕ್ಕತನದಲ್ಲಿ ನಾಯಿಮರಿಯನ್ನು ಹಿಂಸಿಸಿ, ಆ ಪಾಪದ ಫಲವನ್ನು ಅನುಭವಿಸುತ್ತಾನೆಂಬುದು ಅವನ ನಂಬುಗೆ ಮಾತ್ರವಲ್ಲ, ನನ್ನ ನಂಬುಗೆಯೂ ಅದೇ. ನಮ್ಮ ಮಗನೂ ಕೂಡಾ ನಾಯಿಮರಿಯನ್ನು ಬಾಧಿಸಿಕೊಂಡಿದ್ದರೆ ದೊಡ್ಡವನಾದ ಮೇಲೆ ಅವನಿಗೂ ಆನಂದನಿಗೆ ಬಂದಂಥ ಪರಸೇವೆಯ ಗತಿಯೇ ಬರಬಹುದು. ನಮ್ಮವನನ್ನು ಅಂತಹ ಪಾಪದಿಂದ ರಕ್ಷಿಸಿದ್ದಕ್ಕೇ ಅವನಿಗೆ ನಾನು ಬಹುಮಾನ ಕೊಟ್ಟೆ" ಎಂದು ವಿವರಿಸಿ ಹೇಳಿದನು.

ಆ ನಾಯಿಮರಿಯನ್ನು ಕಾಪಾಡಲು ತೊಡಗಿದ ಮೇಲೆ ಆನಂದನಿಗೆ ಅದೃಷ್ಟ ಕೂಡಿ ಬಂತು. ಪಟ್ಟಣದಲ್ಲಿದ್ದ ಚಿಕ್ಕ ವ್ಯಾಪಾರಸ್ಥನೊಬ್ಬನು ಆನಂದನ ಪ್ರವರ್ತನೆಯನ್ನು ಕುರಿತು ಕೇಳಿ, ಬಹಳವಾಗಿ ಮೆಚ್ಚಿ ಸಂತೋಷಪಟ್ಟು ಶ್ರೀಮಂತನ ಅನುಮತಿ ಪಡೆದು, ಆನಂದನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅವನಿಗೆ ಮದುವೆಯ ವಯಸ್ಸಿಗೆ ಬಂದ ಮಗಳೊಬ್ಬಳಿದ್ದಳು. ಆ ಹುಡುಗಿ ಆನಂದನನ್ನು ತುಂಬ ಮೆಚ್ಚಿಕೊಂಡುದರಿಂದ ವರ್ತಕನು ಆನಂದನ ಸಮ್ಮತಿ ಕೇಳಿ, ಅವರಿಬ್ಬರನ್ನೂ ಒಂದುಗೂಡಿಸಿ ಮದುವೆ ನೆರವೇರಿಸಿದನು.

ಆ ಮೇಲೆ ಆನಂದನಿಗೆ ಜೀವಿತದಲ್ಲಿ ಯಾವ ಕಷ್ಟವೂ ಬರಲಿಲ್ಲ, ಚೆನ್ನಾಗಿ ಬಾಳಿ ಬದುಕಿದನು.







# ವಂಚಕ

ಅನೇಕ ವರ್ಷಗಳ ಹಿಂದೆ ಬಲಸುಪಾಡಿ ಎಂಬ ಗ್ರಾಮದಲ್ಲಿ ಬಾಬಣ್ಣನೆಂಬ ವರ್ತಕನಿದ್ದನು. ಅದೇ ಊರಿನಲ್ಲಿದ್ದ ರಾಮಯ್ಯನೆಂಬ ಆಸಾಮಿಯೊಂದಿಗೆ ಬಾಬಣ್ಣನಿಗೆ ಬಿಡಿಸಲಾಗದ ಸಿಕ್ಕು ಬಂದುಬಿಟ್ಟಿತು. ಅದರ ಪೂರ್ವೋತ್ತರಗಳೇನೆಂದರೆ, ರಾಮಯ್ಯನಿಗೆ ಕುಟುಂಬದ ಖರ್ಚು ಸ್ವಲ್ಪ ಹೆಚ್ಚು. ಒಮ್ಮೆ ಅವನಿಗೆ ಇಪ್ಪತ್ತೈದು ರೂಪಾಯಿಗಳು ಅಗತ್ಯವಾಗಿ ಬೇಕಾಯಿತು. ತನ್ನನ್ನು ನಂಬಿ ಊರವರಾರೂ ಒಂದು ಪೈಸೆ ಕೂಡಾ ಕೊಡಲಾರರೆಂದು ರಾಮಯ್ಯನಿಗೆ ಗೊತ್ತಿತ್ತು. ಎಲ್ಲರಲ್ಲಿಯೂ ಕೈಗಡವೋ ಸಾಲವೋ ಮಾಡಿಯಾಗಿತ್ತು. ಕಡೆಗೆ ಬಾಬಣ್ಣನ ಕೈಯಿಂದ ಹೇಗಾದರೂ ಇಪ್ಪತ್ತೈದು ರೂಪಾಯಿಗಳನ್ನು ಕಿತ್ತುಕೊಳ್ಳಬೇಕೆಂದು ಹೊರಟನು ರಾಮಯ್ಯ.

"ಅಯ್ಯಾ, ಬಾಬಣ್ಣನವರೆ! ಒಂದು ಕುತ್ತು ಕುತ್ತಿಗೆಗೇ ಬಂದುಬಿಟ್ಟಿದೆ. ಒಂದೇ ಒಂದು ವಾರದೊಳಗೆ ನೀವು ಕೇಳುವ ಬಡ್ಡಿಯೊಂದಿಗೆ ನಿಮ್ಮ ಕೈಗೆ ಕೊಟ್ಟುಬಿಡುತ್ತೇನೆ. ಇಪ್ಪತ್ತೈದು ರೂಪಾಯಿ ದಯಮಾಡಿ ಕೊಡಿರಿ" ಎಂದು ಪ್ರಾರ್ಥನಾಪೂರ್ವಕವಾಗಿ ಕೇಳಿದನು ರಾಮಯ್ಯ.

ಬಾಬಣ್ಣನು ಹಾಗೆಲ್ಲಾ ಸುಲಭದಲ್ಲಿ ಕೈಬಾರ ಬಿಡುವ ಮನುಷ್ಯನಲ್ಲ. ಆದುದರಿಂದ ನಾಲ್ಕು ಸವಿ ಮಾತುಗಳಿಂದ ಕಳುಹಿಸಿಬಿಡೋಣವೆಂದುಕೊಂಡನು.

"ಅಯ್ಯಯ್ಯೋ, ರಾಮಯ್ಯಾ! ಎಂಥಾ ಸಮಯಕ್ಕೆ ಕೇಳಲಿಕ್ಕೆ ಬಂದಿರಿ! ಏನು ಮಾಡಲಿ? ಇವತ್ತೇ ಇರುವ ಹಣ ಪೂರಾ ಸರಕು ತರಿಸಲು ಕಳಿಸಿಬಿಟ್ಟೆನು. ಇಲ್ಲದಿದ್ದರೆ ಕೊಡುತ್ತಿದ್ದೆ, ನಿಮಗೆ ಕೊಟ್ಟರೆ ಎಲ್ಲಿಗೆ ಹೋಗುತ್ತೆ? ಈಗ ಇಲ್ಲಾ ಅಂದುದಕ್ಕೆ ಅಪಾರ್ಥಮಾಡಿಕೊಳ್ಳಬೇಡಿ ಮತ್ತೆ!" ಎಂದನು ಬಹಳವಾದ ವಿನಯದಿಂದ.

"ಸರಿ ಬಿಡೀ! ಇನ್ನೊಂದು ಕಡೆಯಲ್ಲಿ ನೋಡುತ್ತೇನೆ" ಎಂದು ಹೇಳಿ ರಾಮಯ್ಯನು ಹೊರಟು ಹೋದನು.

ಬಾಬಣ್ಣನ ಕೈಯಿಂದ ಹೇಗಾದರೂ ಮಾಡಿ ಹಣ ಕಿತ್ತುಕೊಳ್ಳದೆ ಬಿಡಬಾರದೆಂದು ಅವನು ಗಟ್ಟಿ ನಿರ್ಧಾರ ಮಾಡಿದ್ದನಷ್ಟೇ? ಆದರೆ ಉಪಾಯವೇನೆಂದು ಮಾತ್ರ ಗೊತ್ತಾಗಲಿಲ್ಲ. ನಿಂತರೂ, ಕುಳಿತರೂ, ಮಲಗಿದರೂ ಅವನಿಗೆ ಅದೇ ಆಲೋಚನೆ. ಕಡೆಗೆ ರಾಮಯ್ಯನು ಏನೋ ಒಂದು

ಉಪಾಯವನ್ನು ಆಲೋಚಿಸಿ, ಬಾಬಣ್ಣನ ಅಂಗಡಿಯ ಹತ್ತಿರಕ್ಕೆ ಹೋದನು. ಅಲ್ಲಿ ಸ್ವಲ್ಪ ಗುಂಪಿನ ಗಿರಾಕಿಗಳಿರುವುದನ್ನು ನೋಡಿ ದೂರದಲ್ಲಿ ನಿಂತನು. ಎಲ್ಲರೂ ಹೊರಟು ಹೋಗಿ ಬಾಬಣ್ಣನೊಬ್ಬನೇ ಇರುವ ಹೊತ್ತು ನೋಡಿ, ಹೋಗಿ ಅವನ ಮುಂದೆ ನಿಂತು, "ಅಲ್ಲ ಬಾಬಣ್ಣಯ್ಯಾ, ಐದು ಹತ್ತುಗಳೆಂದರೆ ಎಷ್ಟಾಗುತ್ತೆ ಹೇಳಿ?" ಎಂದನು.

ಇವನಿಗೆ ಐದರ ಮಗ್ಗಿಯೂ ತಿಳಿಯದಿರುವುದನ್ನು ನೋಡಿ ಬಾಬಣ್ಣನು, "ಇದೊಂದು ದೊಡ್ಡ ಲೆಕ್ಕವೆ? ಐವತ್ತಾಗುತ್ತದೆಂದು ಸಣ್ಣ ಹುಡುಗನೂ ಹೇಳಿಯಾನು" ಎಂದನು.

"ಸರಿ ಸರಿ. ನಿಮಗೂ ಅಷ್ಟೇ ಗೊತ್ತೇನು? ಸರಿಯಾಗಿ ಲೆಕ್ಕ ಮಾಡಿದರೆ ಅರುವತ್ತಾಗುತ್ತದೆ." ಎಂದನು ತೀವ್ರ ಸ್ವರದಲ್ಲಿ ರಾಮಯ್ಯ.

"ಐದು ಹತ್ತುಗಳು ಅರುವತ್ತಾಗಬೇಕಾದರೆ ಲೆಕ್ಕ ಗೊತ್ತಿಲ್ಲದ ಬೆಪ್ಪನ ಹತ್ತಿರ ಹೋಗಬೇಕು!" ಎಂದನು ಬಾಬಣ್ಣ.

"ಬೆಪ್ಪ ಗಿಪ್ಪ ಅಂತ ಯಾರನ್ನು ಹೇಳುತ್ತೀರಿ? ಹತ್ತು ಹತ್ತು ರೂಪಾಯಿಯನ್ನು ಎಣಿಸಿದ್ದು ಅರುವತ್ತಲ್ಲದೆ ಐವತ್ತು ಅನ್ನುವುದುಂಟೆ? ಅದರ ಮೇಲೆ ಬೆಪ್ಪನೆನ್ನುವಿರೇನು? ಅರುವತ್ತೆಂದರೆ ಅರುವತ್ತೆ!" ಎಂದು ಕೂಗಿದನು ರಾಮಯ್ಯ.

"ಇದರಲ್ಲಿ ಸಿಟ್ಟಾಗಲಿಕ್ಕೇನಿದೆ? ನೀವು ಹೇಳಿದ್ದು ಐವತ್ತೇ. ಹೋಗಿರಿನ್ನು" ಎಂದನು ಬಾಬಣ್ಣ.

ಆಗ ಅಂಗಡಿಗೆ ಕೆಲಮಂದಿ ಗಿರಾಕಿಗಳೂ ಬಂದಿದ್ದರು. ಅವರಿಬ್ಬರ ಅರುವತ್ತು ಐವತ್ತರ ಗಲಾಟೆ ಕೇಳಿ. "ಏನಿದು ನಿಮ್ಮ ಗಲಾಟೆ?" ಎಂದು ಒಬ್ಬನು ಕೇಳಿದನು.

"ನೋಡಿರಯ್ಯಾ ಈ ದೊಡ್ಡ ಮನುಷ್ಯ! ಒಮ್ಮೆಗೇ ನನ್ನನ್ನು ಮೋಸಪಡಿಸಲು ನೋಡುವುದೆಂದರೇನಿದು? ನಾನು ಇವರ ಹತ್ತಿರ ಅರುವತ್ತು ರೂಪಾಯಿ ಮೊನ್ನೆ ಚಿಲ್ಲರೆ ಇಲ್ಲದೆ ಬಿಟ್ಟುಹೋಗಿದ್ದೆ. ಅದನ್ನೀಗ ಕೊಡಿರಿ ಅಂತ ಕೇಳಿದರೆ, ಐವತ್ತೇ ಕೊಡಬೇಕಾದ್ದು ಅನ್ನುತ್ತಾರೆ. ಇದುವೋ ನ್ಯಾಯದ



ಅಂಗಡಿ ನಡೆಸುವ ಲಕ್ಷಣ? ತೂಕದಲ್ಲಿ ಮೋಸ ಮಾಡುವುದು ಸಾಲದೆ, ಹೀಗೂ ಮೋಸ ಮಾಡುವುದೇ?" ಎಂದನು ರಾಮಯ್ಯ ನಿಜವನ್ನೇ ಹೇಳುವವನ ಹಾಗೆ.

ಬಾಬಣ್ಣ ದಿಗ್ಭ್ರಾಂತನಾಗಿ. "ಅಲ್ಲಲ್ಲ, ಹಾಗಲ್ಲ," ಎಂದೇನೋ ಹೇಳಲು ನೋಡಲು, ರಾಮಯ್ಯ ಕೋಪದಿಂದ ಕೂಗಿ ತಡೆದನು. "ಇಂಥಾ ಸುಳ್ಳು ಎಲ್ಲಾದರೂ ಉಂಟೇ? ಇದು ದೊಡ್ಡ ಅನ್ಯಾಯ. ಇವರು ನನ್ನ ಹತ್ತಿರ ಹಣ ಬಿಡಲೂ ಇಲ್ಲ. ಕೊಡಲೂ ಇಲ್ಲ. ಹಸಿ ಹಸೀ ಸುಳ್ಳು!" ಎಂದು ಬಾಬಣ್ಣ ಕಿರಿಚಿದನು.

"ನೋಡಿ ಬಾಬಣ್ಣಾ. ನಿಮ್ಮ ನಾಟಕ ನನ್ನ ಮುಂದೆ ತೋರಿಸಬೇಡಿ. ಇದುವರೆಗೆ ಐವತ್ತು ಅಂತ ಹೇಳಿ ಈಗ ಅಸಲೇ ಇಲ್ಲಾ ಅನ್ನುವಿರೇನು? ಆ ಹತ್ತು ರೂಪಾಯಿ ಬೇಕಾದರೆ ತಿಂದುಕೊಳ್ಳಿ. ನೀವು ಒಪ್ಪಿಕೊಂಡ ಐವತ್ತೇ ಕೊಟ್ಟುಬಿಡಿ. ಹೀಗೆಲ್ಲಾ ಒಬ್ಬರನ್ನು ನಂಬಿ ಹಣ ಬಿಡಬಾರದು ಅಂತ ಸರಿಯಾಗಿ ಬುದ್ಧಿ ಕಲಿಸಿದಿರಿ! ಆ ಹತ್ತು ರೂಪಾಯಿ ಹೋದ ಮಾತ್ರಕ್ಕೆ ನಾನೇನೂ ಮಣ್ಣು ತಿನ್ನಲಾರೆ!" ಎಂದನು ರಾಮಯ್ಯ ಬಹಳ ಚಾತುರ್ಯದಿಂದ.

ಅಲ್ಲಿ ಸೇರಿದವರೆಲ್ಲ ರಾಮಯ್ಯನ ಮಾತನ್ನೇ ನಂಬಿದರು. ಅವನು ಮೊನ್ನೆಯ ದಿನ ಚಿಲ್ಲರೆ ಇಲ್ಲದ್ದರಿಂದ ಅರುವತ್ತು ರೂಪಾಯಿಯನ್ನು ಬಾಬಣ್ಣನ ಹತ್ತಿರ ಬಿಟ್ಟಿದ್ದನೆಂದೂ, ಅವನು ಐವತ್ತೇ ಬಿಟ್ಟಿದ್ದೂ, ತಾನು ಕೊಡಲಿರುವುದೂ ಎನ್ನುತ್ತಾನೆಂತಲೇ ಎಲ್ಲರೂ ತಿಳಿದರು.

"ಅಲ್ಲಯ್ಯಾ ಬಾಬಣ್ಣಾ, ಅವರು ಅರುವತ್ತು ಎಂದರೆ ನೀವು ಐವತ್ತು ಎನ್ನುತ್ತಾ ಏಕೆ ಸುಮ್ಮನೆ ಹೊತ್ತು ಕಳೆಯುವುದು? ಅದಾದರೂ ಕೊಡೀ ಅಂತ ಕೇಳುತ್ತಾರಲ್ಲಾ. ಕೊಟ್ಟು ಕಳುಹಿಸಿಬಿಡಿರಪ್ಪ." ಎಂದರು ಅಲ್ಲಿ ಕೂಡಿದವರಲ್ಲಿ ಕೆಲವರು.

ಇನ್ನೂ ತಡಮಾಡಿಬಿಟ್ಟರೆ, ಅರುವತ್ತು ರೂಪಾಯಿಯೇ ಕೊಡಬೇಕಾದೀತೆಂದು ಹೆದರಿ, ಬಾಬಣ್ಣನು ಮಾತಾಡದೆ ಐವತ್ತು ರೂಪಾಯಿಗಳನ್ನು ತೆಗೆದು ರಾಮಯ್ಯನ ಕೈಯಲ್ಲಿಟ್ಟನು.

"ನೋಡಿದೆಯಾ ನನ್ನ ಬುದ್ಧಿವಂತಿಕೆ!" ಎಂಬ ಹಾಗೆ ಹೆಮ್ಮೆಯಿಂದ ಬೀಗಿಕೊಂಡು ರಾಮಯ್ಯನು ಹೊರಟುಹೋದನು.

ಇಪ್ಪತ್ತೈದು ರೂಪಾಯಿ ಸಾಲವಾಗಿ ಕೊಡಲಾರೆನೆಂದವನು, ಅದರ ಇಮ್ಮಡಿಯಷ್ಟು ಸುಮ್ಮನೆ ಕೊಡಬೇಕಾಗಿ ಬಂದುದನ್ನು ನೋಡಿ, ತನ್ನೊಳಗೇ ರೋದಿಸಿಕೊಂಡನು ಬಾಬಣ್ಣ. ಪಾಪ, ಅವನು ಮನೆಯೊಳಗೇ ಮಾತಾಡದೆ ಮೂರು ದಿನ ಮುಸುಕು ಹಾಕಿಕೊಂಡಿದ್ದನು.





ಎರಡು ಪಕ್ಷಗಳ ಸೈನ್ಯಗಳೂ ಕುರುಕ್ಷೇತ್ರ ಯುದ್ಧರಂಗದಲ್ಲಿ ಸೇರಿರಲು, ಕೃಷ್ಣನು ಅರ್ಜುನನ ರಥವನ್ನು ಅವನ ಅಪೇಕ್ಷೆಯಂತೆ ರಣರಂಗದ ಮಧ್ಯಕ್ಕೆ ತಂದು ನಿಲ್ಲಿಸಿದನು.

ಅರ್ಜುನನು ಯುದ್ಧಕ್ಕೆ ಸನ್ನದ್ಧರಾಗಿ ಬಂದ ತಾತಂದಿರನ್ನು, ತಂದೆಯರನ್ನು, ಗುರುಗಳನ್ನು, ಬಂಧುಗಳನ್ನು, ಮಿತ್ರರನ್ನು ನೋಡಿ ದೊಡ್ಡ ಚಿಂತೆಗೆ ಬಿದ್ದನು. ರಥದಿಂದ ಇಳಿದು, ಧನುಸ್ಸು ತೂಣೀರಗಳನ್ನು ನೆಲದ ಮೇಲೆ ಹಾಕಿ ಕುಸಿದು ಕುಳಿತು, "ನನ್ನಿಂದಾಗದು ಕೃಷ್ಣಾ ! ರಾಜ್ಯವೂ ಬೇಡ, ಈ ಯುದ್ಧವೂ ಬೇಡ. ಯಾರನ್ನೂ ಇದಿರಿಸಿ ನೆಟ್ಟಗೆ ನಿಲ್ಲಲಾರೆ. ಯಾರ ಸಾವನ್ನೂ ನೋಡಲಾರೆ ! ಇದು ಬಹಳ ಘೋರ !" ಎಂದನು.

ಅದನ್ನು ಕೇಳಿ ಕೃಷ್ಣನು ಅವನ ಮುಂದೆ ಬಂದು "ಇದೇನು ಅರ್ಜುನಾ ! ಯುದ್ಧರಂಗಕ್ಕೆ ಬಂದು ಅವಿವೇಕದಲ್ಲಿ ಬಿದ್ದು ಹೀಗೆ ಅಸ್ತ್ರ ಸನ್ಯಾಸ ಮಾಡುವುದೆಂದರೇನಿದು ? ಇದು ಕ್ಷತ್ರಿಯ ವೀರನಾದ ನಿನಗೆ ಉಚಿತವಾದ ಕಾರ್ಯವೇ ಅಲ್ಲ. ಎಲೈ ಪಾರ್ಥನೇ ! ಕಾಲವು ಯಾವಾಗಲೂ ಕರ್ತವ್ಯವನ್ನು ಪ್ರಬೋಧಿಸುತ್ತಾ ಇರುತ್ತದೆ. ಕರ್ತವ್ಯ ನಿರ್ವಹಣೆಗಿಂತ ಹೆಚ್ಚಿನ ಧರ್ಮವಾಗಲೀ ಯೋಗವಾಗಲೀ ಯಾವುದೂ ಇಲ್ಲ.

"ನರನು ನಿಮಿತ್ತ ಮಾತ್ರನಷ್ಟೇ. ನಡೆಯಿಸುವವನು ನಾರಾಯಣನೇ. ನರನೂ ನಾರಾಯಣನೂ ಬೇರೆ ಬೇರೆಯಾಗಿ ಕಾಣುವರಾದರೂ ಅವರಿಬ್ಬರೂ ಒಬ್ಬರೇ ಎಂದು ತಿಳಿ.

"ಅಧರ್ಮವನ್ನು ಇದಿರಿಸಿ. ನ್ಯಾಯಕ್ಕಾಗಿ ಹೋರಾಟವನ್ನು ಸಾಗಿಸಿ, ಒಳಿತಿಗೆ ವಿಜಯವಾಗುವಂತೆ ಮಾಡಿ, ಕೆಡುಕನ್ನು ನಿರ್ಮೂಲಿಸಲು ನರನು ನಾರಾಯಣನಿಗೆ ಸಾಧನವಾಗಿರುವವನು.

"ಈ ವಿಶ್ವವೆಲ್ಲವೂ ನಿತ್ಯ ಸಂಘರ್ಷಣೆಗಳಿಂದ ಪರಿಣಾಮ ಹೊಂದುತ್ತ, ಸಾಧುರಕ್ಷಣ, ದುಷ್ಟಶಿಕ್ಷಣ, ಧರ್ಮಸಂಸ್ಥಾಪನೆಗಳು ನಡೆಯುತ್ತಾ ಇರುತ್ತವೆ. ಅದಕ್ಕಾಗಿಯೇ ಭಗವಂತನು ಯುಗಯುಗದಲ್ಲಿಯೂ

೧೯. ಭಗವದ್ಗೀತೆ



ಅವತರಿಸುತ್ತಾ ಇರುತ್ತಾನೆ. ಆ ಭಗವಂತನ ಅವತಾರವಾಗಿ ನನ್ನನ್ನೂ ಗುರುತಿಸಿಕೊಂಡು ನಾನು ಹೇಳುವಹಾಗೆ ಮಾಡು. ಫಲವನ್ನು ನನಗೇ ಬಿಡು. ನಿನ್ನ ವಿಧಿಯನ್ನು ನೀನು ನೆರವೇರಿಸು. ಕರ್ಮವೀರನಾಗಿ ಸ್ವಧರ್ಮ ಪಾಲನೆಯನ್ನು ಮಾಡು" ಎಂದು ಹೇಳುತ್ತಾ ತನ್ನ ವಿಶ್ವವಿರಾಟ ಸ್ವರೂಪವನ್ನು ತೋರಿಸಿದನು.

ಸೃಷ್ಟಿ, ಸ್ಥಿತಿ ಲಯಗಳು ಚಕ್ರಭ್ರಮಣದಂತೆ ಉರುಳುತ್ತಿರಲು, ಸಾಯುವುದು, ಕೊಲ್ಲುವುದು. ಕರ್ತ ಕರ್ಮ ಕ್ರಿಯೆಗಳು ಒಂದಾಗಿಯೇ ಕಾಣುತ್ತವೆ. ಕಾಲವು ವಿರಾಟ ಸ್ವರೂಪನಾದ ಭಗವಂತನ ಇರುವಿಕೆಯೆಂಬುದು ಅರ್ಜುನನಿಗೆ ಆ ವಿಶ್ವರೂಪ ದರ್ಶನದಿಂದ ಅರ್ಥವಾಯಿತು.

ಅರ್ಜುನನ ಸಂದೇಹಗಳೆಲ್ಲಾ ನಿವೃತ್ತಿಯಾಗಿ ಚಿಂತೆ ಪೂರ್ತಿ ತೊಲಗಿತು. ಕೃಷ್ಣನೇ ತನ್ನನ್ನು ನಡೆಸುವವನು. ತಾನು ಯಾವುದಕ್ಕೂ ಹೊಣೆಯಲ್ಲ. ಈ ನಿಶ್ಚಯದಿಂದ ನಿಜವಾದ ಅರ್ಜುನನಾಗಿ ಗಾಂಡೀವವನ್ನು ಹಿಡಿದು ತೂಣೀರವನ್ನು ಧರಿಸಿ, ಬಾಣವನ್ನು ಎತ್ತಿದನು ಅರ್ಜುನ.

ಅಜರಾಮರವೆಂಬ ಪ್ರಸಿದ್ಧವಾದ ಮಹಾಸಂಗ್ರಾಮವು ನಡೆದು ಪಾಂಡವರು ಗೆದ್ದರು. ಆ ದಿನ ರಾಯಭಾರದಲ್ಲಿ ಕೃಷ್ಣನು ಹೇಳಿದುದೆಲ್ಲವೂ ನಿಜವಾಯಿತು. ಭೀಮನ ಪ್ರತಿಜ್ಞೆ ತೀರಿತು. ದುಶ್ಶಾಸನನ ಮರಣದಿಂದ ದ್ರೌಪದಿ ಬಿಚ್ಚಿದ ತನ್ನ ಕೂದಲನ್ನು ಸುತ್ತಿ ಮುಡಿಕಟ್ಟಿಕೊಂಡಳು.

ಅಭಿಮನ್ಯುವಾಗಿ ಹುಟ್ಟಿದ ಕಾಲನೇಮಿ ವೀರಸ್ವರ್ಗವನ್ನು ಅಲಂಕರಿಸಿದನು.

ಕರ್ಣನಾಗಿದ್ದ ಸಹಸ್ರ ಕವಚನ ಅಂಶವು ಪರಮಶಿವನನ್ನು ಹೋಗಿ ಸೇರಿಕೊಂಡಿತು. ನರನಾರಾಯಣರು ಯಾವುದಕ್ಕಾಗಿ ಕೃಷ್ಣಾರ್ಜುನರಾಗಿ ಹುಟ್ಟಿದರೋ ಆ ಕೆಲಸ ತೀರಿ ಹೋಯಿತು.

ತಾನು ಕೃಷ್ಣನಾಗಿ ಅವತರಿಸಿ ಭೂಭಾರವನ್ನು ತಗ್ಗಿಸುವೆನೆಂದು ವಿಷ್ಣು ಭೂದೇವಿಗೆ ಅಭಯ ನೀಡಿದಂತೆ ಎಲ್ಲವನ್ನೂ ಮಾಡಿ ಮುಗಿಸಿದನು.

ಅಶ್ವತ್ಥಾಮನು ಪಾಂಡವ ವಂಶವೇ ಭೂಮಿಯಲ್ಲಿಲ್ಲದಂತೆ ಮಾಡುವೆನೆಂದು ಪಣ ತೊಟ್ಟು ಪ್ರಯೋಗಿಸಿದ ಅಸ್ತ್ರ ಪ್ರಭಾವದಿಂದ, ಉತ್ತರೆ ಉಸಿರಿಲ್ಲದ ಶಿಶುವನ್ನು ಹೆತ್ತಳು. ಕೃಷ್ಣನು ತನ್ನ ಪಾದದಿಂದ ಆ ಶಿಶುವನ್ನು ಮೆಟ್ಟಿ ಪರೀಕ್ಷಿಸಿ ಶ್ವಾಸವಾಡುವಂತೆ ಮಾಡಿದನು. ಆ ಶಿಶು ಪರೀಕ್ಷಿತನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಪಾಂಡವರ ವಂಶಾಂಕುರಕ್ಕೆ ಕಾರಣನಾದನು.

ಧೃತರಾಷ್ಟ್ರನು ಭೀಮನನ್ನು ಶ್ಲಾಘಿಸುತ್ತ ಅಪ್ಪಿಕೊಳ್ಳಬೇಕೆಂದು ಕೈಚಾಚಿದನು. ಕೃಷ್ಣನು ಭೀಮನಿಗೆ ಬದಲಾಗಿ, ಉಕ್ಕಿನ ವಿಗ್ರಹವನ್ನು ಅವನ ಕೈಗೆ ಸಿಗುವಂತೆ ಇರಿಸಿದುದರಿಂದ, ಧೃತರಾಷ್ಟ್ರನ ಪೂರ್ತಿ ಬಲದ ಆಲಿಂಗನದಲ್ಲಿ ಆ ವಿಗ್ರಹವು

ಪೂರ್ತಿ ಪುಡಿ ಪುಡಿಯಾಗಿ ಬಿದ್ದು ಹೋಯಿತು. ಗಾಂಧಾರಿ ಕೃಷ್ಣನೊಂದಿಗೆ, "ಎಲೇ ಕೃಷ್ಣಾ. ಕೌರವರ ಹಾಗೆಯೇ ನಿನ್ನ ಯಾದವ ಕುಲವೂ ಅಂತರಿಸಿ ಹೋಗುತ್ತದೆ!" ಎಂದು ಪುತ್ರಶೋಕ ದಿಂದ ಶಪಿಸುವ ಹಾಗೆ ಹೇಳಿದಳು.

ಅದನ್ನು ಕೇಳಿ ಕೃಷ್ಣನು ನಕ್ಕು, "ಮಹಾ ಸಾಧ್ವಿ ಯಾದ ಗಾಂಧಾರಿ ದೇವಿಯೇ! ನಿನಗೆ ಸಂದೇಹವೇ ಬೇಡ. ನೀನು ಹೇಳಿದಹಾಗೆಯೇ ನಡೆಯುತ್ತದೆ. ವಿಧಿಯ ನಿರ್ಣಯವೇ ನಿನ್ನ ನಾಲಗೆಯಿಂದ ಹೊರ ಟಿದೆ" ಎಂದು ಹೇಳಿದನು.

ಪಂಚಪಾಂಡವರಿಂದ ದ್ರೌಪದಿಗೆ ಹುಟ್ಟಿದ ಕುಮಾರರಾದ ಉಪಪಾಂಡವರು ಐವರನ್ನೂ ಅಶ್ವ ತ್ಥಾಮನು, ಅವರು ನಿದ್ರಿಸಿಕೊಂಡಿದ್ದಾಗ ಕಡಿದು ಕೊಂದಿದ್ದನು. ಕೃಷ್ಣಾರ್ಜುನರು ಅಶ್ವತ್ಥಾಮನನ್ನು ಹಿಡಿದು ರಥಕ್ಕೆ ಕಟ್ಟಿತಂದು ದ್ರೌಪದಿಯ ಮುಂದೆ ನಿಲ್ಲಿಸಿದರು.

ಅವನನ್ನು ನೋಡಿ ದ್ರೌಪದಿ ಸಂತಾಪದಿಂದ, "ನೀನು ಹೇಯವಾದ ಜೀವಿತವನ್ನು ಅನುಭವಿ ಸುತ್ತ ಚಿಂತಿಸಿಕೊಂಡೇ ಚಿರಕಾಲ ಬದುಕಿರು. ನಿನಗೆ ಅದೇ ಶಿಕ್ಷೆ!" ಎಂದಳು.

ಕೃಷ್ಣನು ಅಶ್ವತ್ಥಾಮನ ಶಿರಸ್ಸಿನಲ್ಲಿದ್ದ ಶಿರೋ ಮಣಿಯನ್ನು ಕೇಳಿಸಿ ಬಿಟ್ಟು ಬಿಟ್ಟನು. ಶಿರೋಮಣಿ ಯನ್ನು ಕಳೆದುಕೊಂಡ ಅಶ್ವತ್ಥಾಮನು ಮಹಾ ರೋಗಗ್ರಸ್ತನಾಗಿ, ಯಾರಿಗೂ ಕಾಣದಂತೆ ಎತ್ತಲೋ ಹೋದನು.

ಭಾರತ ಯುದ್ಧದಲ್ಲಿ ಬಿದ್ದ ಇಚ್ಛಾಮರಣಿಯಾದ ಭೀಷ್ಮನು ಉತ್ತರಾಯಣವನ್ನು ಇದಿರು ನೋಡುತ್ತ ಶರಶಯ್ಯೆಯಲ್ಲಿ ಮಲಗಿದ್ದನು. ಅವನು ಧರ್ಮ ರಾಜನಿಗೆ ಧರ್ಮ ಸೂಕ್ಷ್ಮಗಳನ್ನು, ರಾಜಧರ್ಮ, ತತ್ವ ನೀತಿಗಳನ್ನು, ಕೃಷ್ಣನ ಮಹಿಮೆಗಳನ್ನು ವಿವರಿಸಿ ಹೇಳುತ್ತ, ಕೃಷ್ಣನ ಸಹಸ್ರ ನಾಮಗಳನ್ನು ಹೇಳಿ



ಸ್ತುತಿಸುತ್ತ, ಉತ್ತರಾಯಣವು ಬಂದಕೂಡಲೇ ದೇಹವನ್ನು ಬಿಟ್ಟು ಪರಮಪದದಲ್ಲಿ ವಸುಗಳನ್ನು ಸೇರಿದನು. ಭೀಷ್ಮನು ದಿವಂಗತನಾದ ದಿನವು ಭೀಷ್ಮ ಏಕಾದಶಿ ಎಂದು ಹೆಸರು ಪಡೆಯಿತು.

ಧರ್ಮರಾಜನಿಗೆ ಪಟ್ಟಾಭಿಷೇಕವಾಯಿತು. ಕೃಷ್ಣನು ಹಸ್ತಿನಾಪುರದಿಂದ ದ್ವಾರಕೆಗೆ ಪ್ರಯಾಣ ಮಾಡಿದನು. ಸ್ವಲ್ಪಕಾಲ ಕಳೆಯುತ್ತಿರಲು ಧರ್ಮ ರಾಜನು ಹಿರಿಯರ ಆದೇಶದಂತೆ ಅಶ್ವಮೇಧ ಯಾಗ ಮಾಡಲು ಪ್ರಾರಂಭಿಸಿದನು.

ಹಾಗಿರುವಾಗ ಅತ್ತ ದ್ವಾರಕೆಯಲ್ಲಿ ಯಾದವರು ಅಂಕೆ ಶಂಕೆಗಳಿಲ್ಲದೆ ವಿಪರೀತವಾಗಿ ವಿಜೃಂಭಿಸಿ ಬೇರೆ ಬೇರೆ ಗುಂಪುಗಳಾಗಿ, ಒಂದೊಂದಕ್ಕೂ ಒಬ್ಬನು ನಾಯಕನಾದನು.

ಭಾರತ ಯುದ್ಧವು ಪ್ರಾರಂಭವಾಗುವುದಕ್ಕೆ ಮೊದಲೇ ಬಲರಾಮನು ತೀರ್ಥಯಾತ್ರೆಗಾಗಿ ದ್ವಾರಕೆಯನ್ನು ಬಿಟ್ಟು ಹೊರಟು ಹೋಗಿದ್ದನು.



ಕೃಷ್ಣನೂ ಯಾದವ ವೀರ ಪ್ರಮುಖರೂ ಯುದ್ಧರಂಗದಲ್ಲಿರುವಾಗ, ಕೃಷ್ಣನಂತಹ ಮಹಾ ವೀರನು ತಮ್ಮವನೆಂಬ ಗರ್ವದಲ್ಲಿ ತಲೆತಿರುಗಿ ದ್ವಾರಕೆಯಲ್ಲಿದ್ದ ಯಾದವರು ಕೇವಲ ಸ್ವೇಚ್ಛಾಚಾರಿಗಳಾಗಿ ಹೋದರು.

ಅವರು ಸಾಂಬನೆಂಬವನಿಗೆ ಗರ್ಭಿಣಿಯ ವೇಷ ಹಾಕಿಸಿ "ಓ ಓ! ತುಂಬಿದ ಬಸಿರಿ! ಮಗ ಹುಟ್ಟುತ್ತಾನೆ!" ಎಂದು ಒಬ್ಬನೆಂದರೆ, "ಇಲ್ಲಾ, ಹೆಣ್ಣು ಮಗು ಹುಟ್ಟುತ್ತೆ!" ಎಂದನು ಇನ್ನೊಬ್ಬ. "ಗಂಡೇ ಹುಟ್ಟುತ್ತೆ!" "ಹೆಣ್ಣೇ ಹುಟ್ಟುತ್ತೆ!" ಎಂದು ಅವರೆಲ್ಲ ಗಲಾಟೆ ಮಾಡತೊಡಗಿದರು. ಆಗ ಆ ದಾರಿಯಾಗಿ ವಿಶ್ವಾಮಿತ್ರ ಮೊದಲಾದ ಮಹರ್ಷಿಗಳು ಬರುತ್ತಿದ್ದರು. ಯಾದವರು ಗರ್ಭಿಣಿವೇಷದವನನ್ನು ಮುಂದೆ ಮಾಡಿ, ಆ ಮುನಿಗಳಿಗೆ ಅಡ್ಡ ನಿಂತು, "ಮಹಾ ಸ್ವಾಮಿಗಳು! ನೀವು ಹೇಳಿ! ನಿಮಗೆಲ್ಲಾ ಗೊತ್ತು. ಈ ಗರ್ಭಿಣಿ ಎಂಥಾ ಮಗು ಹಡೀತಾಳೆ? ಹೆಣ್ಣೋ ಗಂಡೋ?" ಎಂದು ಕೇಳಿದರು ಪರಿಹಾಸವಾಗಿ ತಲೆಯಾಡಿಸಿ ನಗುತ್ತಾ.

ಮಹರ್ಷಿಗಳಿಗೆ ಕೋಪಬಂದಿತು. "ಮಂದಮತಿಗಳೇ! ಹುಚ್ಚು ಹಿಡಿದ ಯಾದವರೇ! ನಿಮ್ಮೆಲ್ಲರನ್ನೂ ನಿರ್ಮೂಲಿಸುವಂಥ ಮುಸಲವನ್ನು ಹಡಿಯುತ್ತಾಳೆ!" ಎಂದು ಹೇಳಿ ತಮ್ಮ ದಾರಿಹಿಡಿದು ಹೋಗಿಬಿಟ್ಟರು.

ಆ ಮಾತುಕೇಳಿ ಯಾದವರು ನಿರ್ಲಕ್ಷ್ಯವಾಗಿ ಗಲಗಲನೆ ನಕ್ಕರು. ಮತ್ತಿಷ್ಟು ಗೇಲಿ ಮಾಡುತ್ತ ಕುಣಿದರು.

ಕಡೆಗೆ ಸಾಂಬನು ಪ್ರಸವವೇದನೆಯಿಂದ ಕಿರಿಚಿದನು. ಅವನ ವೇಷಬಿಚ್ಚಿದಾಗ ಚಿಕ್ಕ ಒನಕೆಯಂತಹ ಲೋಹದ ವಸ್ತುವೊಂದು ಠಣಾರನೆ ನೇಲಕ್ಕೆಬಿದ್ದಿತು.

ಅದನ್ನು ನೋಡಿ ಯಾದವರಿಗೆ ಬೆಪ್ಪು, ಬೆರಗು, ದಿಗಿಲು,, ನಡುಕ ಎಲ್ಲಾ ಬಂದುವು. ಕೃಷ್ಣನು ದ್ವಾರಕೆಗೆ ಬಂದ ಕೂಡಲೇ ನಡೆದ ಸಮಾಚಾರವನ್ನೆಲ್ಲಾ ಅವನೊಂದಿಗೆ ಹೇಳಿ ಒನಕೆಯನ್ನು ತೋರಿಸಿದರು.

ಕೃಷ್ಣನು ಆ ಒನಕೆಯನ್ನು ಚೂರ್ಣವಾಗುವಂತೆ ತೇಯಿಸಿ ಅಳಿಸಿ ಹಾಕಿಸಿದನು. ಆ ಚೂರ್ಣವನ್ನೂ, ಕಡೆಗೆ ಉಳಿದ ಮೊನಚಾದ ಚೂರನ್ನೂ ಸಮುದ್ರಕ್ಕೆ ಹಾಕಿಸಿದನು. ಆ ಚೂರನ್ನು ಕೂಡಲೇ ಒಂದು ಮೀನು ನುಂಗಿಬಿಟ್ಟಿತು. ಅನಂತರ ಬೇಡನೊಬ್ಬನು ಆ ಬದಿಯಲ್ಲಿ ಮೀನು ಹಿಡಿಯುವಾಗ, ಒನಕೆಯ ಚೂರನ್ನು ನುಂಗಿದ ಮೀನು ಅವನ ಕೈಗೆ ಸಿಕ್ಕಿತು. ಅದನ್ನು ಕೊಯ್ಯುವಾಗ ಆ ಚೂರು ಅವನಿಗೆ ಸಿಕ್ಕಿತು. ಅದನ್ನು ಅವನು ತನ್ನ ಬಾಣದ ಮೊನೆಗೆ ತಗಲಿಸಿಟ್ಟುಕೊಂಡನು.

ಆ ಒನಕೆಯ ಚೂರ್ಣವು ನೀರಿನ ತೆರೆಗಳಲ್ಲಿ ತೇಲುತ್ತಾ ನದೀ ತೀರದ ದಿಬ್ಬಗಳಲ್ಲಿ ಸೇರಿ ಮಣ್ಣಿನೊಳಗೆ ಹೂತಿತ್ತು, ಅಲ್ಲೆಲ್ಲ ಹರಿತವಾದ ಅಂಚುಗಳುಳ್ಳ, ಉದ್ದುದ್ದವಾದ ಕಂತಿಹುಲ್ಲು ಗಿಡಗಳಾಗಿ



ಬೆಳೆದು ಕತ್ತಿಗಳ ಕಾಡಿನಂತೆ ದಟ್ಟವಾದುವು. ಒಂದು ದಿನ ಯಾದವರು ಸಮುದ್ರ ತೀರವನ್ನು ಸೇರಿ ವಿನೋದವಾಗಿ ಕಾಲಕಳೆಯಲು ಮೈಮರೆಯುವಂತೆ ಕುಡಿದು ತಿಂದು ಸೊಕ್ಕಿ ಒಬ್ಬರನ್ನೊಬ್ಬರು ಗೇಲಿಮಾಡುತ್ತ, ಕಲಹಕ್ಕೆ ತೊಡಗಿದರು. ಗುಂಪು ಗುಂಪುಗಳು ತಾಕಲಾಡಿದುವು. ಯಾದವ ವೀರರಿಗೆ ವೀರತ್ವವೇ ಸೊತ್ತು ಎಂದು ಒಬ್ಬರನ್ನೊಬ್ಬರು ಹೊಡೆದುಕೊಂಡರು. ಏಕೆ ಜಗಳವೋ ತಿಳಿಯದೆ, ಅಲ್ಲೆಲ್ಲಾ ದಟ್ಟವಾಗಿ ಬೆಳೆದ ಕಂತಿಹುಲ್ಲಿನ ಬುಡವನ್ನೇ ಕಿತ್ತು ಒಬ್ಬರಮೇಲೊಬ್ಬರು ಬೀಸಿ ಕಡಿದು ಒಬ್ಬರೂ ಉಳಿಯದಂತೆ ಎಲ್ಲರೂ ಮಡಿದು ಬಿದ್ದರು. ನೀಲಬಣ್ಣದಲ್ಲಿದ್ದ ಸಮುದ್ರದ ನೀರು ಯಾದವರ ರಕ್ತದಿಂದ ಕೆಂಪಾಯಿತು.

ಕೃಷ್ಣನ ತಮ್ಮಂದಿರಲ್ಲಿ ಒಬ್ಬನಾದ ಉದ್ಧವನೊಬ್ಬನೇ ಉಳಿದನು. ಅವನು ಕೃಷ್ಣಾವತಾರದ ತತ್ವವನ್ನು ತಿಳಿದವನು. ಪರಮ ಪುರುಷನಾದ ನಾರಾಯಣನೇ ಕೃಷ್ಣನಾಗಿ ಅವತರಿಸಿದವನೆಂದು ಅರಿತುಕೊಂಡವನು. ಸಂಸಾರ ಬಂಧನದಲ್ಲಿ ಬೀಳದೆ ಸೌಮ್ಯಜೀವನದಿಂದ ಕಾಲಕಳೆಯುತ್ತಿದ್ದವನು.

ನಡೆದ ದಾರುಣಗಳನ್ನೆಲ್ಲ ನೋಡಿ ಬಲರಾಮನು ವಿರಕ್ತನಾಗಿ, ಅರಣ್ಯಕ್ಕೆ ಹೋಗಿ, ಯೋಗನಿಷ್ಠೆಯಿಂದ ಶರೀರವನ್ನು ಬಿಟ್ಟು, ವೈಕುಂಠದಲ್ಲಿ ಮಹಾಶೇಷನಾಗಿ ಸೇರಿದನು.

ದ್ವಾರಕಾನಗರದಲ್ಲಿದ್ದ ಸ್ತ್ರೀ ಬಾಲ ವೃದ್ಧರೆಲ್ಲರನ್ನೂ ಕರೆದುಕೊಂಡು ಹೋಗುವಂತೆ ಕೃಷ್ಣನು ಅರ್ಜುನನಿಗೆ ಹೇಳಿಕಳುಹಿಸಿದನು. ಸಮುದ್ರ ರಾಜನು ದ್ವಾರಕೆಗಾಗಿ ಕೊಟ್ಟ ಜಾಗವನ್ನು ಇನ್ನು ಏಳು ದಿನಗಳೊಳಗೆ ಸಮುದ್ರನಿಗೆ ಬಿಟ್ಟುಕೊಡ ಬೇಕಾಗಿತ್ತು. ಆಮೇಲೆ ಆ ಪ್ರದೇಶವನ್ನು ಸಮುದ್ರ ಜಲವು ಆಕ್ರಮಿಸಿಕೊಳ್ಳುತ್ತದೆ. ಇದನ್ನೆಲ್ಲಾ ಕೃಷ್ಣನು ಉದ್ಧವನಿಗೆ ಹೇಳಿ, ಅನೇಕ ಪರಮಾರ್ಥ ತತ್ವಗಳನ್ನೂ, ವೇದಾಂತವಿಷಯಗಳನ್ನೂ ಉಪದೇಶ ಮಾಡಿ ತನ್ನ ವಿಷ್ಣು ಸ್ವರೂಪವನ್ನು ತೋರಿಸಿ ತನ್ನ ಅನಂತರ ಉದ್ಧವನು ಮಾಡಬೇಕಾದಕೆಲಸಗಳನ್ನು ಕುರಿತು ಹೇಳಿದನು.

ಯಾದವಕುಲದ ಅಂತ್ಯದೊಂದಿಗೆ ಕೃಷ್ಣನು ಅವತರಿಸಿದ ಕೆಲಸ ಪೂರ್ತಿಯಾಯಿತು. ಭೂಭಾರವು ಪೂರ್ತಿ ತಗ್ಗಿ ಸಮಸ್ಥಿತಿಗೆಬಂತು.

ಕೃಷ್ಣನು ಯಮುನಾತೀರದ ವನದೊಳಗೆ ಪ್ರವೇಶಿಸಿ ಮಧುರಾತಿ ಮಧುರವಾಗಿ ಮುರಳೀಗಾನ ಮಾಡತೊಡಗಿದನು. ಆ ಸ್ವರದಿಂದ ಹೊರಡುವ ಹಿಂದೋಳವೂ, ಯಮುನಾ ಕಲ್ಯಾಣಿಯೂ, ದೇವಗಾಂಧಾರವೂ ಪ್ರಕೃತಿಯನ್ನು ಆನಂದ ಪರವಶ ಮಾಡಿತು. ಯಮುನೆ ಗಂಭೀರವಾಗಿ ಹರಿಯುವುದೇ ಗೊತ್ತಾಗದಂತೆ ಸ್ತಬ್ಧವಾಯಿತು. ತರುವಾಯ ಕೃಷ್ಣನು ಒಂದು ಮರದ ಕಾಂಡಕ್ಕೆ ಒರಗಿಕೊಂಡು ಕಾಲಿನ ಮೇಲೆ ಕಾಲನ್ನಿಟ್ಟು ಪಾದವನು ಆಡಿ



ಸುತ್ತಾ ತನ್ನ ಪಾಡಿಗೆ ವಿಶ್ರಮಿಸಿಕೊಂಡಿದ್ದನು. ಆಗ ಒನಕೆಯ ಮೊನೆಯನ್ನು ಬಾಣಕ್ಕೆ ತಗಲಿಸಿ ಕೊಂಡಿದ್ದ ಬೇಡನು ಆಚೆಯ ತೀರದಿಂದ ಮರದ ಮರೆಯಲ್ಲಿ ಆಡುತ್ತಿರುವ ಕೃಷ್ಣನ ಪಾದವನ್ನು ನೋಡಿದನು. ಅದೊಂದು ಎರಳೆಯ ಮುಖದಂತೆ ಅವನಿಗೆ ಕಂಡಿತು. ಕೂಡಲೇ ಅವನು ಬಿಲ್ಲಿಗೆ ಬಾಣ ಹೂಡಿ ಪ್ರಯೋಗಿಸಿಬಿಟ್ಟನು. ಕೃಷ್ಣನ ಪಾದಕ್ಕೆ ಒನಕೆಯ ಮೊನೆ ಬಹಳ ಆಳಕ್ಕೆ ಚುಚ್ಚಿಕೊಂಡಿತು. ರಕ್ತವು ಬೊಟ ಬೊಟನೆ ಸುರಿಯತೊಡಗಿತು.

ಹಿಂದೆ ದುರ್ವಾಸನು ಕೃಷ್ಣನ ಅತಿಥಿಯಾಗಿ ಬಂದು ತನ್ನ ಶರೀರಾದ್ಯಂತಕ್ಕೂ ಪಾಯಸವನ್ನು ಲೇಪಿಸುವಂತೆ ಕೃಷ್ಣನಿಗೆ ಹೇಳಿದ್ದನು. ಕೃಷ್ಣನು ದುರ್ವಾಸನ ಸರ್ವಾಂಗಕ್ಕೂ ಪಾಯಸವನ್ನು ಹಚ್ಚಿ ಪಾದಕ್ಕೆ ಪೂಸುವುದನ್ನು ಮರೆತುಹೋದನು.

ಆಗ ದುರ್ವಾಸ ಮಹರ್ಷಿಯು, "ಕೃಷ್ಣಾ, ಪಾದದಿಂದ ಮಾತ್ರವೇ ನಿನಗೆ ಕೇಡು ಬರುತ್ತದೆ. ನೆನಪಟ್ಟುಕೋ" ಎಂದಿದ್ದನು. ಆ ಮಾತು ಈಗ ಕೃಷ್ಣನ ನೆನಪಿಗೆ ಬಂತು. ಅದೇ ಸಮಯದಲ್ಲಿ ಬೇಟೆಗಾರನು ತಾನು ಹೊಡೆದ ಪ್ರಾಣಿಯನ್ನು ಎತ್ತಿಕೊಂಡು ಹೋಗಲು ಬಂದು, ಗಾಯದಿಂದ ನೊಂದುಕೊಂಡಿರುವ ಕೃಷ್ಣನನ್ನು ನೋಡಿದನು. ತನ್ನ ತಪ್ಪಿಗಾಗಿ ಬೇಡನು ದುಃಖಿಸುವುದನ್ನು ನೋಡಿ ಕೃಷ್ಣನು, "ಅಪ್ಪಾ, ನೀನೇನೂ ಚಿಂತಿಸ ಬೇಡ. ರಾಮಾವತಾರದಲ್ಲಿ ನೀನು ವಾಲಿಯ ಮಗ ಅಂಗದನಾಗಿದ್ದವನು. ನಿನ್ನ ತಂದೆಯಾದ ವಾಲಿ ಯನ್ನು ನಾನು ಮರೆಯಲ್ಲಿ ನಿಂತು ಕೊಂದೆನು. ಅದಕ್ಕೆ ಪರಿಹಾರವಾಗಿ ನಿನ್ನಿಂದ ಪೆಟ್ಟುತಿಂದೆನು" ಎಂದು ಹೇಳಿ ತನ್ನ ರಾಮಾವತಾರವನ್ನು ಅವನಿಗೆ ತೋರಿಸಿದನು.

ಆಗ ಬೇಟೆಗಾರನಿಗೆ ಪೂರ್ವಜನ್ಮದ ಸ್ಮೃತಿ ಯುಂಟಾಗಿ ಭಕ್ತಿಯಿಂದ ಕೃಷ್ಣನಿಗೆ ನಮಸ್ಕರಿಸುತ್ತಾ ಮೈಮರೆತು ರಾಮಧ್ಯಾನದಲ್ಲೇ ಕಣ್ಣು ಮುಚ್ಚಿದನು ಅಲ್ಲಿಯೇ ಅವನು ಶರೀರದಿಂದ ಮುಕ್ತನಾಗಿ ವಿಷ್ಣು ಸಾಯುಜ್ಯವನ್ನು ಹೊಂದಿದನು.

ಕೃಷ್ಣನ ಸಾರಥಿಯಾದ ದಾರುಕನು ಹುಡುಕುತ್ತಾ ಅಲ್ಲಿಗೆ ಬಂದು ಕೃಷ್ಣನನ್ನು ನೋಡಿ ಶೋಕಿಸಲು ತೊಡಗಿದನು. ಕೃಷ್ಣನು ದಾರುಕನಿಗೆ ಸಮಾಧಾನ ಹೇಳಿ, "ನೀನು ದ್ವಾರಕೆಗೆ ಹೋಗಿ ಎಲ್ಲರಿಗೂ ದ್ವಾರಕೆಯನ್ನು ಬಿಟ್ಟು ಹೋಗಬೇಕೆಂದು ಹೇಳು. ಉದ್ಧವನಿಗೂ ಅಕ್ರೂರನಿಗೂ ನನ್ನ ಅನುಗ್ರಹ ವಿರುವುದನ್ನು ಹೇಳಿ ಆಶೀರ್ವಾದ ತಿಳಿಸು. ಅರ್ಜುನನಿಗೂ ಹೇಳು. ನಿಮ್ಮೆಲ್ಲರನ್ನೂ ಕರೆದು ಕೊಂಡು ಹೋಗಲು ಅವನಿಗೆ ಹೇಳಿದ್ದೇನೆ. ಆ ಕೆಲಸ ಬೇಗನೇ ಆಗಬೇಕೆಂದು ಹೇಳು !" ಎಂದು ಆಜ್ಞೆಮಾಡಿ ಕಳುಹಿಸಿದನು.

ದಾರುಕನು ಇಷ್ಟವಿಲ್ಲದೆ ಅಡಿಗಡಿಗೂ ಹಿಂದಿರುಗಿ ನೋಡುತ್ತಾ ಹೊರಟುಹೋದನು.

ಅನಂತರ ಕೃಷ್ಣನು ಕೊಳಲನ್ನು ತೆಗೆದುಕೊಂಡು ಅತ್ಯಂತ ಮಧುರವಾಗಿ ನಾದ ಹೊರಡಿಸುವುದರಲ್ಲಿ ಲೀನನಾದನು. ಆ ರಾಗವು ಒಂದೇ ಸಮನೆ ಹೊರಡುತ್ತಾ ಪ್ರಣವನಾದವಾಗಿ ಝೇಂಕರಿಸಿ ಕೊಂಡು ಹೋಯಿತು.

ಅದರೊಂದಿಗೇ ಕೃಷ್ಣನು ಲೀಲಾಮಾನುಷ ವಿಗ್ರಹವನ್ನು ತ್ಯಜಿಸಿ ನಾದಾಂತರಾಳದಲ್ಲಿ ಹೋಗಿ ವೈಕುಂಠದ ಶೇಷತಲ್ಪದ ಮೇಲೆ ಪವಡಿಸಿದನು.

ಯಮುನಾನದಿಗೆ ದುಃಖವು ತಾಳಲಾಗದೆ ಮೇಲೆ ಮೇಲೆ ಉಕ್ಕೇರಿತು. ಆ ಇಡೀ ವನವನ್ನೆಲ್ಲಾ ಯಮುನಾಜಲವು ಮುಳುಗಿಸಿಬಿಟ್ಟಿತು. ನಿರ್ಯಾಣ ಹೊಂದಿದ ಕೃಷ್ಣನನ್ನು ಯಮುನೆ ತನ್ನ ಒಡಲಿ ನೊಳಗೆ ಅಡಗಿಸಿಕೊಂಡಳು.

ಕೃಷ್ಣನು ಯಾವಾಗ ನಿರ್ಯಾಣನಾದನೋ ಆ ಮರುಕ್ಷಣದಲ್ಲಿಯೇ ಕಲಿಯುಗವು ಪ್ರವೇಶ ಮಾಡಿತು. ಕಲಿ ಪ್ರಭಾವವು ಆಗಲೇ ಪ್ರಾರಂಭ ವಾಗತೊಡಗಿತು.

ಉದ್ಧವನು ಕೃಷ್ಣಾವತಾರದ ತತ್ವವನ್ನೂ, ಕೃಷ್ಣಭಕ್ತಿಯನ್ನೂ ಲೋಕದಲ್ಲಿ ಪ್ರಬೋಧ ಮಾಡಿ ಕೊಂಡಿದ್ದನು.

ಕೃಷ್ಣನು ಉದ್ಧವನಿಗೆ ಉಪದೇಶ ಮಾಡಿದ ವಿಷಯಗಳೆಲ್ಲವೂ ಭಗವದ್ಗೀತೆಯಲ್ಲಿ ಸೇರಿಕೊಂಡು, ಭಗವದ್ಗೀತೆ ಆಚಂದ್ರಾರ್ಕಸ್ಥಾಯಿಯಾಗಿ ನೆಲೆನಿಂತಿದೆ. ಕೃಷ್ಣನು ಲೀಲಾಮಾನುಷ ವಿಗ್ರಹನೆಂದು ಅವನ ಇಡೀ ಜೀವನಚರಿತ್ರೆಯಿಂದ ಗೊತ್ತಾಗುತ್ತದೆ. ತನ್ನ ಅವತಾರದ ಪ್ರಯೋಜನವನ್ನು ಸಾರ್ಥಕಗೊಳಿಸ ಲಿಕ್ಕಾಗಿ, ಯಾವ ಕಾಲಕ್ಕೆ ಹೇಗೆ ಹೇಗೆ ನಡೆದು ಕೊಳ್ಳಬೇಕೋ ಅದನ್ನೆಲ್ಲ ಚೆನ್ನಾಗಿ ತಿಳಿದು, ಆಚರಣೆಯಲ್ಲಿ ತೋರಿಸಿದ ದೊಡ್ಡ ಸರ್ವಜ್ಞನು ಕೃಷ್ಣ. ಕಾರ್ಯವಾದಿಯಾಗಿ, ಆದರ್ಶಗಳಿಗಿಂತಲೂ ದುಷ್ಟಶಿಕ್ಷಣ, ಶಿಷ್ಟರಕ್ಷಣಗಳೇ ಅವನ ಗುರಿ. ಮುಖ್ಯವಾಗಿ ರಾಜತಂತ್ರಗಳಿಗೆ ಅವನೇ ಆದರ್ಶ ರೂಪಿ. ಮಾನವಲೀಲೆಗಳನ್ನು ಬಹಳ ಚೆನ್ನಾಗಿ ಮಾಡಿ ತೋರಿಸಿದವನಾದರೂ ಮಾನವ ಸಹಜ ವಾದ ಬಯಕೆಗಳಿಗೂ, ಅನುಬಂಧಗಳಿಗೂ ಅಂಟದೆ, ರಾಗದ್ವೇಷಗಳಿಗೆ ಅತೀತನಾಗಿ ತನ್ನನ್ನು ತಾನು ತಿಳಿದುಕೊಂಡವನಾದುದರಿಂದಲೇ ಲೀಲಾಮಾನುಷ ಮೂರ್ತಿಯೆಂದು ಖ್ಯಾತನಾಗಿದ್ದಾನೆ.

ಕೃಷ್ಣಾವತಾರದ ಮಹಾ ಫಲವಾಗಿ ಭಗವದ್ಗೀತೆ ಎಲ್ಲಾ ಕಾಲಕ್ಕೂ, ಎಲ್ಲದಕ್ಕೂ ಪ್ರಮಾಣ ಗ್ರಂಥವಾಗಿ, ಚಿಕ್ಕದಾದರೂ ಪ್ರಪಂಚದಷ್ಟು ತೂಕವಾಗಿ ನಿಂತಿದೆ. ಭಾರತವು ಪಂಚಮ ವೇದವೆನಿಸಿದೆ.

ಹೀಗೆ ಸೂತಪುರಾಣಿಕನು ಕೃಷ್ಣಾವತಾರದ ಮಹಾ ಕಥೆಯನ್ನು ಹೇಳಿ ಮುಗಿಸಿದನು.





# ಸುಲ್ತಾನನ ಎಚ್ಚರಿಕೆ

**ಒಂ**ದು ಸಾರಿ ಬಸ್ರಾ ನಗರದ ಸುಲ್ತಾನನ ಭವನದೊಳಗೆ ದೊಡ್ಡದೊಂದು ಕಳ್ಳತನದ ಸಂಭವ ನಡೆಯಿತು. ಬೆಲೆ ಬಾಳುವ ಅನೇಕ ವಸ್ತು ಒಡವೆಗಳಷ್ಟೇ ಅಲ್ಲದೆ, ಸುಲ್ತಾನನು ಅತ್ಯಮೂಲ್ಯವೆಂದು ಪರಿಗಣಿಸಿಕೊಂಡಿದ್ದ, ವಜ್ರಖಚಿತವಾದ ಹಿಡಿಯುಳ್ಳ ಪುರಾತನ ಖಡ್ಗವೊಂದು ಕೂಡಾ ಕಳವಾಗಿ ಹೋಯಿತು. ಅಂತಲೇ ಈ ಕಳ್ಳತನವು ರಾಜ್ಯದಲ್ಲೇ ಬಹು ದೊಡ್ಡ ಕೊಳ್ಳೆಯ ಹಾಗೆ ಸುಲ್ತಾನನನ್ನು ವೇಧಿಸಿತು. ಸುಲ್ತಾನನು ನಗರದೊಳಗಿನ ಮುಖ್ಯ ರಕ್ಷಕ ಭಟಾಧಿಕಾರಿಗಳನ್ನೆಲ್ಲಾ ಕರೆಯಿಸಿ, ತನ್ನ ಭವನದಲ್ಲಾದ ಕಳ್ಳತನದ ವಿವರಗಳನ್ನು ಹೇಳಿದನು. ಆ ವಿಷಯದಲ್ಲಿ ತನ್ನ ಚಿಂತೆ ಎಷ್ಟರಮಟ್ಟಿನದೆಂಬುದನ್ನೂ ಅವರಿಗೆ ತಿಳಿಸಿದನು.

ಅದನ್ನು ಕೇಳಿ ಆ ಅಧಿಕಾರಿಗಳು, ತಮ್ಮ ಸಾಮರ್ಥ್ಯವನ್ನು ವಿವರಿಸಿ, ಆ ಕಳ್ಳನನ್ನು ತಾವು ಒಂದೆರಡು ಗಂಟೆಗಳೊಳಗೇ ಹಿಡಿದು ತರುವೆವೆಂದು ಸುಲ್ತಾನನೊಡನೆ ಹೇಳಿದರು.

ಅದನ್ನು ಕೇಳಿ ಸುಲ್ತಾನನು ಕೋಪದಿಂದ ಕಣ್ಣು ತಿರುಗಿಸಿ, "ನಿಮ್ಮ ಕರಾಮತಿ ಎಂತಹುದೆಂದು ನನಗೆ ಗೊತ್ತಿದೆ. ಒಂದೊಂದು ಸಾರಿ ಕಳ್ಳರನ್ನು ಹಿಡಿಯುವೆವೆಂದು ಮಾಡುವ ನಿಮ್ಮ ಡೊಂಕು ಪದ್ಧತಿ ನೋಡಿದ್ದೇನೆ. ಯಾವನೋ ಒಬ್ಬ ಪರದೇಶಿಯನ್ನೋ, ಬಾಯಿಬಿದ್ದುಹೋದ ಭಿಕ್ಷುಕನನ್ನೋ ಹಿಡಿದುಕೊಂಡು ನನ್ನ ಇದಿರಿಗೆ ತರಬೇಡಿ. ಕಳ್ಳನೊಂದಿಗೆ ಅವನು ನನ್ನ ಭವನದಿಂದ ಕದ್ದುಕೊಂಡು ಹೋದ ಎಲ್ಲ ವಸ್ತುಗಳನ್ನೂ ತರಬೇಕು. ಇದಕ್ಕೆ ನಿಮಗೆ ನಾಳೆ ಸಾಯಂಕಾಲದವರೆಗೆ ಸಮಯ ಕೊಡುತ್ತೇನೆ. ಕಾರ್ಯವು ಅನುಕೂಲವಾಗದೆ ಹೋದರೆ ನಿಮ್ಮೆಲ್ಲರನ್ನೂ ಕೆಲಸದಿಂದ ಕಿತ್ತು ಬಿಸುಡುತ್ತೇನೆ. ಇದು ಖಂಡಿತ! ಸುಮ್ಮನೆ ಇಲ್ಲದ ವೀರಪ್ರತಾಪ ನನ್ನ ಮುಂದೆ ಕೊಚ್ಚಿಕೊಳ್ಳ ಬೇಡಿರಿ. ಹೋಗಿರಿ!" ಎಂದನು.

ಸುಲ್ತಾನನ ಈ ಎಚ್ಚರಿಕೆಯನ್ನು ಕೇಳಿ ಆ ಉದ್ಯೋಗಸ್ಥರಿಗೆಲ್ಲ ಕಳ್ಳನನ್ನು ಹೇಗಾದರೂ ಹಿಡಿದೇ ತೀರಬೇಕೆಂಬ ಹಟ ಹುಟ್ಟಿತು. ತಪ್ಪಿದರೆ ಉದ್ಯೋಗ ಹೋಗುತ್ತದೆಂಬ ಭಯ.

ಅವರೆಲ್ಲರೂ ಕೂಡಿ ಬಹಳ ತೀವ್ರವಾಗಿ ಚರ್ಚೆ ಮಾಡಿಕೊಂಡರು. ತಾವು ಬೇರೆ ಬೇರೆ ವೇಷಗಳನ್ನು

**ಅರೇಬಿಯಾ ಕಥೆ**

ಹಾಕಿಕೊಂಡು ಒಬ್ಬೊಬ್ಬನೂ ನಗರದೊಳಗಿನ ಒಂದೊಂದು ಪ್ರಾಂತಕ್ಕೆ ಹೋಗಿ, ಕಳ್ಳರನ್ನು ಅನ್ವೇಷಿಸಬೇಕು. ಸಾಯಂಕಾಲದಲ್ಲಿ ನಗರದ ದಕ್ಷಿಣ ದಿಕ್ಕಿನಲ್ಲಿರುವ ಪಾನಶಾಲೆಯ ಹತ್ತಿರ ಕೂಡಿಕೊಳ್ಳಬೇಕು. ಹೀಗೆ ನಿರ್ಣಯಿಸಿ ಒಬ್ಬೊಬ್ಬರು ಒಂದೊಂದಾ ಕಡೆಗೆ ಹೊರಟುಹೋದರು.

ಅವರಲ್ಲಿ ಒಬ್ಬ ಉದ್ಯೋಗಸ್ಥನು ಭಿಕ್ಷುಕನ ವೇಷ ಧರಿಸಿಕೊಂಡನು. ಅವನು ನಗರದ ಉತ್ತರ ಭಾಗದಲ್ಲಿ ತಿರುಗುತ್ತ, ನಡು ಮಧ್ಯಾಹ್ನದವರೆಗೆ ಎಲ್ಲಿಯೂ ನಿಲ್ಲದೆ ಅಲೆದಲೆದು ತುಂಬ ದಣಿದನು. ಕಡೆಗೆ ಬಾಯಾರಿಕೆ ತೀರಿಸಿಕೊಳ್ಳಲು ನೀರನ್ನು ಹುಡುಕುತ್ತ, ಒಂದು ಸಣ್ಣ ಉದ್ಯಾನವನದ ಹತ್ತಿರ ಬಂದನು. ಅಲ್ಲಿ ಮರಗಳ ನಡುವೆ ಶುದ್ಧ ನೀರಿನ ಕೊಳವಿರುವುದನ್ನು ನೋಡಿದನು.

ಉದ್ಯೋಗಸ್ಥನು ಆ ಕೊಳದ ಬಳಿಗೆ ಹೋಗಿ ನೀರು ಕುಡಿಯಲು ನೋಡುವಾಗ, ಉದ್ಯಾನದ ಕಾವಲುಗಾರನು ಅವನನ್ನು ನೋಡಿಬಿಟ್ಟನು. ಅವನು ಓಡೋಡುತ್ತ ಬಂದು ಆ ಉದ್ಯೋಗಸ್ಥನ ಕುತ್ತಿಗೆ ಹಿಡಿದು, "ಎಲೋ ತಿರುಗೂಳಿ ಭಡವಾ! ತಿಪ್ಪೇ ಬಾಚ ಭಂಡಾ! ಯಾರ ಅನುಮತಿ ಕೇಳಿ ಇಲ್ಲಿಗೆ ಬಂದೆ? ನೀನೊಬ್ಬ ಕಳ್ಳನೇ ನಿಜ! ಹೌದಾ?" ಎನ್ನುತ್ತಾ ಮುಷ್ಟಿಯಿಂದ ಬೆನ್ನಿಗೂ ತಲೆಗೂ ಗುದ್ದತೊಡಗಿದನು.

ಮಾರುವೇಷದಲ್ಲಿದ್ದುದರಿಂದ ರಕ್ಷಕ ಭಟಾಧಿಕಾರಿ ಅದಕ್ಕೆ ತಕ್ಕಂತೆ ದೀನತೆಯಲ್ಲೇ ಇರಬೇಕಾಗಿ ಬಂದು, ದೊಡ್ಡ ಇಕ್ಕಟ್ಟಿಗೇ ಬಿದ್ದನು. ಅವನು ನರಳುತ್ತ ಗದ್ಗದ ಕಂಠದಿಂದ, "ಅಯ್ಯಯ್ಯಾ! ಹೊಡೀಬೇಡಿ! ನಾನು ಕಳ್ಳನೇನೂ ಅಲ್ಲ! ಈ ಮಧ್ಯಾಹ್ನದ ವೇಳೆಯಲ್ಲಿ ಸ್ವಲ್ಪ ನೀರು ಕುಡಿಯೋಣವೆಂತ ಇಲ್ಲಿಗೆ ಬಂದೆ. ನಿಜಕ್ಕೂ ಬಾಯಿ ಪಸೆಪೂರಾ ಆರಿದೆ. ಇಲ್ಲಿ ನಾನೇನು ಕಳ್ಳತನ ಮಾಡೇನು ಅಯ್ಯಾ!" ಎಂದನು.

"ಹಾಗೇನು? ನೀರು ಕುಡೀಲಿಕ್ಕೆ ಬಂದರೆ ಅದಕ್ಕೆ ತಕ್ಕ ಶಿಕ್ಷೆ ಇದೇ" ಎಂದು ಕಾವಲಿಗನು ಈ ಸಾರಿ ಕಾಲುಗಳಿಂದ ಅವನನ್ನು ಒದೆಯತೊಡಗಿದನು.



ಆಗ ರಕ್ಷಕ ಭಟಾಧಿಕಾರಿ ದೊಡ್ಡದಾಗಿ ಆರ್ತನಾದ ಮಾಡುತ್ತ, "ಅಯ್ಯಯ್ಯೋ ! ಬೇಡ ಬೇಡಾ ! ಬಿಡಿ ಬಿಡೀ ! ನನ್ನ ಪ್ರಾಣಾ ಹೋಗುತ್ತೇ ! ನನ್ನನ್ನು ಕೊಲ್ಲುವ ಹಕ್ಕು ನಿಮಗಿಲ್ಲಾ ! ನಾನು ಕಳ್ಳನೇ ಅಂತ ನಿಮಗೆ ಕಂಡರೆ ಭಟರ ವಶಕ್ಕೆ ಒಪ್ಪಿಸಿರೀ" ಎಂದು ಕೂಗಿದನು.

"ಆಹಾಹಾ ! ನನಗೇ ಕಾನೂನು ಮರ್ಯಾದೇ ಎಲ್ಲಾ ಕಲಿಸಿಕೊಡಲು ನೋಡುವಿಯಾ ?" ಎಂದು ಕಾವಲಿನವನು ಆ ಉದ್ಯೋಗಸ್ಥನನ್ನು ಉದ್ಯಾನದೊಳಗಿನಿಂದ ಹೊರಗೆ ಎಳೆದುಕೊಂಡು ಬಂದು ದೂಡಿ ಬೀಳಿಸಿ, ಉತ್ಸಾಹದಿಂದ ಸಿಳ್ಳುಹಾಕುತ್ತಾ ಹೊರಟುಹೋದನು.

ರಕ್ಷಕ ಭಟಾಧಿಕಾರಿ ಉಸಿರುಬಿಡುತ್ತ ಕಾಲೆಳೆದುಕೊಂಡು ಹೋಗಿ ಪಾನಶಾಲೆಯ ಹತ್ತಿರ ಉಳಿದ ಸಂಗಡಿಗರನ್ನು ಕಲೆತನು. ತಲೆಕೆದರಿ, ಮೋರೆ ತರಚಿ, ಚಿಂದಿಚಿಂದಿಯಾದ ಬಟ್ಟೆಗಳಿಂದ ಬಂದ ಅವನನ್ನು ನೋಡಿ ಉದ್ಯೋಗಸ್ಥರೆಲ್ಲಾ ಆಶ್ಚರ್ಯಪಟ್ಟರು.

ಏಟು ತಿಂದ ಉದ್ಯೋಗಸ್ಥನು ನಡೆದ ಸಮಾಚಾರವನ್ನೆಲ್ಲಾ ಅವರೊಂದಿಗೆ ಹೇಳಿದನು. ಅವರಿಗೆಲ್ಲಾ ಆ ಕಾವಲುಗಾರನ ಮೇಲೆ ತಾಳಲಾಗದಷ್ಟು ಕೋಪ ಬಂದಿತು. ಕಳ್ಳನ ಸಂಗತಿಯನ್ನು ಮರೆತು ಮೊದಲು ಆ ಕಾವಲುಗಾರನಿಗೆ ತಕ್ಕ ಶಾಸ್ತಿ ಮಾಡಬೇಕೆಂದು ಆವೇಶವೆದ್ದಿತು ಅವರಿಗೆ.

ಅವರೆಲ್ಲ ಬೇಗ ಬೇಗ ಊಟ ತೀರಿಸಿ, ತಮ್ಮ ಮಾರುವೇಷಗಳನ್ನು ತೆಗೆದು, ತಮ್ಮ ರಕ್ಷಕ ಭಟಾಧಿಕಾರೀ ದುಸ್ತುಗಳೊಂದಿಗೆ ಆ ಉದ್ಯಾನವನಕ್ಕೆ ಹೋದರು.

ಅವರು ನೇರಾಗಿ ಉದ್ಯಾನದೊಳಗ್ಗೆ ನುಸುಳದೆ, ಮರಗಿಡಗಳ ಮರೆಯಲ್ಲಿ ಒಳಭಾಗವನ್ನು ಹಣಿಕಿ ನೋಡಿದರು.

ಕಾವಲುಗಾರನು ಒಬ್ಬ ಹತ್ತು ವಯಸ್ಸಿನ ಹುಡುಗನೊಂದಿಗೆ ಉತ್ಸಾಹದಿಂದ ಮಾತಾಡುತ್ತಿದ್ದನು. ರಕ್ಷಕ ಭಟಾಧಿಕಾರಿಗಳು ಸದ್ದಾಗದಂತೆ ಹಿಂಬದಿಯಲ್ಲಿ ಅವರ ಸಮೀಪಕ್ಕೇ ಹೋದರು.



ಅಧಿಕಾರಿಗಳಲ್ಲೊಬ್ಬನು ಒಮ್ಮೆಗೇ ಮುಂದೆ ಹಾರಿ ಒಂದು ಕೈಯಿಂದ ಕಾವಲಿನವನ ಕುತ್ತಿಗೆಯನ್ನು ಹಿಡಿದು, ಎರಡನೇ ಕೈಯಿಂದ ಅವನ ಡೊಕ್ಕೆಗೆ ತಿವಿಯತೊಡಗಿದನು.

ಪೆಟ್ಟಿನ ವೇದನೆಯನ್ನು ತಾಳಲಾಗದೆ ಕಾವಲಿನವನು ಕೆಟ್ಟ ದನಿಯಿಂದ ಕೂಗಲು ಪ್ರಾರಂಭಿಸಿದನು. ಅವನಿಂದ ಹಿಂಸಿಸಲ್ಪಟ್ಟ ಉದ್ಯೋಗಸ್ಥನು, "ಎಲೋ ! ನರಪಶೂ ! ಯಾರೋ ಕಳ್ಳಾ ! ನೀನೇ ! ನೀನೇ !" ಎಂದು ಗಟ್ಟಿಯಾಗಿ ಒದೆಯತೊಡಗಿದನು.

ಅಷ್ಟು ಮಂದಿ ರಕ್ಷಕ ಭಟಾಧಿಕಾರಿಗಳನ್ನು ಒಮ್ಮೆಗೇ ನೋಡಿ ಹೆದರಿದ ಹುಡುಗನು, "ಅಯ್ಯಾ ಅಯ್ಯಾ ! ನನ್ನ ಮಾವಯ್ಯನ್ನ ಹೊಡೀಬೇಡ್ರೀ ! ಅವರು ಕದ್ದು ತಂದ ವಸ್ತುಗಳನ್ನು ಎಲ್ಲಿ ಅಡಗಿಸಿಟ್ಟಿದ್ದೂ ಅಂತ ನಾನು ಹೇಳುತ್ತೇನೆ. ತೋರಿಸುತ್ತೇನೆ !" ಎಂದನು.

"ಎಲ್ಲಿ ಅಡಗಿಸಿಟ್ಟಿದ್ದಾನೆ ?" ಎಂದು ಕೇಳಿದರು, ಎಲ್ಲ ಅಧಿಕಾರಿಗಳೂ ಆಶ್ಚರ್ಯವನ್ನು ತಮ್ಮೊಳಗೇ ಅಡಗಿಸಿಕೊಂಡು.

ಹುಡುಗನು ಭೀತಿಯಿಂದ ಗಡಗಡ ನಡುಗುತ್ತ, ಅವರನ್ನು ಉದ್ಯಾನದೊಳಗಿನ ಒಂದು ಮೂಲೆಯಲ್ಲಿ ಗುಂಪಾಗಿ ಬೆಳೆದ ಹೂವಿನ ಗಿಡಗಳ ಹತ್ತಿರ ಕರೆದುಕೊಂಡು ಹೋದನು.

ಅಲ್ಲಿ ಒಂದು ಕಡೆಯಲ್ಲಿ ಅಗೆದು ನೋಡುವಾಗ, ಸುಲ್ತಾನನ ಭವನದಲ್ಲಿ ಕಳವಾಗಿ ಹೋದ ಎಲ್ಲಾ ವಸ್ತುಗಳೂ ಸಿಕ್ಕಿದುವು. ವಜ್ರಖಚಿತ ಹಿಡಿಯ ವಿಶೇಷವಾದ ಖಡ್ಗವೂ ಸಹ ಅಲ್ಲಿ ಹುಗಿದಿಡಲ್ಪಟ್ಟಿತ್ತು.

ಅದನ್ನು ನೋಡಿ ಅವರಿಗೆ ಹಿಡಿಸಲಾರದಷ್ಟು ಸಂತೋಷವಾಗಿ ಕುಣಿಯಬೇಕೆನಿಸಿತು. ಭಿಕ್ಷುಕನ ವೇಷದಲ್ಲಿ ಕಾವಲಿನವನ ಕೈಯಿಂದ ಚರ್ಮ ಸುಲಿಯುವಷ್ಟು ಪೆಟ್ಟು ತಿಂದ ಉದ್ಯೋಗಸ್ಥನು ಅವನನ್ನು ನೋಡಿ, "ಎಲೋ ! ನಿನ್ನನ್ನು ಯಾವುದೋ ಪಿಶಾಚಿ ಆಕ್ರಮಿಸಿ ಸುಲ್ತಾನರ ಭವನದೊಳಗೆ ಕಳ್ಳತನ ಮಾಡಿಸಿದೆ. ಅದಕ್ಕೆ ಅದೊಂದು ಆಟ. ಈಗ ಅದೇ ಪಿಶಾಚಿ ನಿನಗೆ ಕೇಡು ಮಾಡಲು ಶುರು ಮಾಡಿ, ನೀರು ಕುಡಿಯಲು ಬಂದ ಭಿಕ್ಷುಕನನ್ನು ಸದೆಬಡೆಯುವ ಹಾಗೆ ಮಾಡಿತು. ಈಗ ನಿನ್ನ ಕಳ್ಳತನ ಬಯಲಿಗೆ ಬಿತ್ತು. ಇನ್ನು ಫಲವನ್ನು ಅನುಭವಿಸು" ಎಂದನು.

ಈ ಮಾತು ಕೇಳಿದ ಮೇಲೆ ಕಾವಲಿನವನಿಗೆ, ಈ ಮೊದಲು ಭಿಕ್ಷುಕನ ಹಾಗೆ ಬಂದು ತನ್ನ ಕೈಯಿಂದ ಪೆಟ್ಟು ತಿಂದವನು, ನಿಜವಾದ ಭಿಕ್ಷುಕನಲ್ಲವೆಂದೂ, ರಕ್ಷಕ ಭಟೋದ್ಯೋಗಿಯೇ ಆ ವೇಷದಲ್ಲಿ ಬಂದನೆಂದೂ ಗೊತ್ತಾಯಿತು.



# ತಿಳಿಯದ ಸಂಗತಿಗಳು

**ಕೊ**ಳಗುಂಟೂರಿನ ಜಮೀನ್ದಾರರು ಬಹಳ ಉದಾರ ಗುಣವುಳ್ಳವರು. ವ್ಯಾಪಾರಕ್ಕಾಗಿ ಮೂಲಧನ ಬೇಕೆಂಬವರಿಗೆ ಅವರು ಸಹಾಯ ಮಾಡುತ್ತಿದ್ದರು. ಆದರೆ ಹಾಗೆ ಬಂದವರ ಬುದ್ಧಿವಂತಿಕೆಯನ್ನು ಪರೀಕ್ಷೆ ಮಾಡದೆ ಮಾತ್ರ ಹಣಕೊಡುತ್ತಿರಲಿಲ್ಲ.

ಒಂದು ದಿನ ಅವರ ಬಳಿಗೆ ಕೋಳಿಮೊಟ್ಟೆ ವ್ಯಾಪಾರವನ್ನು ಪ್ರಾರಂಭಿಸಲು ಹಣಬೇಕೆಂದು, ಗುಡ್ಡಪ್ಪ ಗೋಡಪ್ಪ ಎಂಬ ಪಾಪದವರಿಬ್ಬರು ಬಂದರು.

ಅವರಿಗೆ ಆ ವ್ಯಾಪಾರದಲ್ಲಿ ಎಷ್ಟರಮಟ್ಟಿಗೆ ತಿಳಿದಿದೆ ಎಂಬುದನ್ನು ಅರಿಯಲು, ಜಮೀನ್ದಾರರು ಸ್ವಲ್ಪ ಯೋಚಿಸಿ, "ನಿಮಗೆ ಕೋಳಿಮೊಟ್ಟೆಗಳನ್ನು ಕುರಿತು ಗೊತ್ತಿಲ್ಲದ ಸಮಾಚಾರ ಏನಾದರೂ ಇದೆಯೆ ? ಇದ್ದರೆ ಹೇಳಿರಿ" ಎಂದು ಹೇಳಿದರು.

ಅದಕ್ಕೆ ಗುಡ್ಡಪ್ಪನು, "ಮೊಟ್ಟೆಯನ್ನು ಒಡೆದುಕೊಂಡು ಹೊರಗೆ ಬರುವವರೆಗೂ ಕೋಳೀಮರಿ ಗಾಳಿ ಬೆಳಕುಗಳಿಲ್ಲದ ಆ ಕತ್ತಲೆ ಕೋಣೆಯೊಳಗೆ ಹೇಗೆ ಇರಲು ಸಾಧ್ಯವಾಗಿದೆಯೋ ನನಗೆ ಗೊತ್ತಿಲ್ಲ" ಎಂದನು.

ಗೋಡಪ್ಪನು ಒಂದೆರಡು ಕ್ಷಣ ತಲೆಯಾಡಿಸಿಕೊಂಡಿದ್ದು "ಹೌದು. ಅದು ಆಶ್ಚರ್ಯದ ಸಂಗತಿಯೇ ನಿಜ. ಆದರೆ ಅದಕ್ಕಿಂತ ಹೆಚ್ಚಿನ ಆಶ್ಚರ್ಯವೇನಂದರೆ, ಕೋಳೀಮರಿ ಹೊರಗೆ ಬರಲಿಕ್ಕೆ ಮೊಟ್ಟೆಯ ಚಿಪ್ಪನ್ನು ಒಡೆಯಬೇಕಾಗಿ ಬರುತ್ತದಷ್ಟೆ ? ಆದರೆ ಅದೇ ಕೋಳೀಮರಿ ಮೊಟ್ಟೆಯೊಳಗೆ ಹೋಗುವಾಗ ಮೊಟ್ಟೆಯ ಚಿಪ್ಪನ್ನು ಒಡೆಯದೆ ಹೇಗೆ ಒಳಗೆ ಹೋಗಲು ಸಾಧ್ಯವಾಯಿತು ? ಈ ಸಂಗತಿ ಎಷ್ಟು ಆಲೋಚನೆ ಮಾಡಿದರೂ ನನಗೆ ಗೊತ್ತಾಗುವುದಿಲ್ಲ !" ಎಂದನು.

ಜಮೀನ್ದಾರರು ಅವರು ಹೇಳಿದ ಮಾತು ಕೇಳಿ ನಗುತ್ತಾ, "ನೀವು ಕೋಳೀಮೊಟ್ಟೆ ವ್ಯಾಪಾರದಲ್ಲಿ ಮುಂದೆ ಬರಲಾರಿರಿ. ಬೇರೇನಾದರೂ ತಿಳಿದಿರುವ ವ್ಯಾಪಾರವನ್ನು ಆಲೋಚನೆ ಮಾಡಿಕೊಂಡು ಬನ್ನಿ" ಎಂದು ಹೇಳಿ ಇಬ್ಬರನ್ನೂ ಕಳುಹಿಸಿಬಿಟ್ಟರು.






## ೧೫

[ಹಡಗು ಒಡೆದು ಮುಳುಗಲು ಪಿಂಗಳನು ಸಿಕ್ಕಿದ ಹಲಗೆ ತುಂಡಿನ ಆಧಾರದಲ್ಲಿ ಈಜುತ್ತಾ ಹೋಗಿ ಯಾವುದೋ ಮರು ಭೂಮಿಯ ತೀರವನ್ನು ಸೇರಿಕೊಂಡನು. ಅಲ್ಲಿ ನವಾಬನ ಸೇನಾನಾಯಕನಾದ ಹಸನ್‌ಗೋರೀ ಎಂಬವನೊಂದಿಗೆ ಪರಿಚಯವಾಯಿತು. ಪಿಂಗಳನೂ ಹಸನ್‌ಗೋರಿಯೂ, ಅನುಚರರೂ "ಮರು ಭೂಮಿಯ ಕಳ್ಳರನ್ನು ಹಿಡಿಯಲು, 'ಇಖಿಬಿಲ್ಲಾ' ಎಂಬ ಕೋಟೆಯ ಕಡೆಗೆ ಹೊರಟರು.]

**ನ**ವಾಬನ ಒಂಟೆಗಳ ಪಟಾಲಂ ನಾಯಕನಾದ ಹಸನ್‌ಗೋರೀ ಕೈತೋರಿಸಿದ ಕಡೆಗೆ ಪಿಂಗಳನು ದೃಷ್ಟಿ ಹರಿಸಿ ನೋಡಿದನು. ಕಣ್ಣು ಹೊಸಗಿ ಕೊಂಡು ನೋಡಿದ ಮೇಲೆ ಭಣಭಣಿಸುವ ಆ ಮರುಭೂಮಿಯ ಯಾವುದೋ ಕೊನೆಯಲ್ಲಿ ಏನೋ ಗುಡ್ಡದ ಹಾಗೆ ಕಂಡಿತು. ಇನ್ನೂ ಪರೀಕ್ಷಿಸಿ ನೋಡಿದಾಗ ಅದೊಂದು ಪುರಾತನ ಕೋಟೆಯಾಗಿರುವುದೆಂದು ಅರ್ಥವಾಯಿತು. ಕೋಟೆಯ ಬದಿಯಿಂದ ಚಿಕ್ಕದೊಂದು ಬೆಟ್ಟದ ತೊರೆ ಹರಿಯುತ್ತಿರುವುದೂ ಕಾಣುತ್ತಿತ್ತು. ಮರುಭೂಮಿಯಲ್ಲಿ ನೀರಿರುವ ಸ್ಥಳವದು. ಮುಂದೆ ಹೋಗುತ್ತಿದ್ದ ಹಾಗೆ ಆ ತೊರೆಯ ಎರಡು ತೀರಗಳಲ್ಲಿ ಎತ್ತರವಾದ ಖರ್ಜೂರದ ಮರಗಳು ಗಾಳಿಗೆ ತಲೆಯಾಡಿಸುತ್ತಾ ಇದ್ದುವು. ಆದರೆ ಅಲ್ಲೆಲ್ಲಿಯೂ ಮನುಷ್ಯರಿರುವುದು ಕಾಣಲಿಲ್ಲ. ಕೋಟೆಯ ಬುರುಜುಗಳ ಮೇಲಾಗಲೀ, ಗೋಡೆಗಳ ಮೇಲಾಗಲೀ, ಬಾಗಿಲಿನ ಭಾಗದಲ್ಲಾಗಲೀ ಒಬ್ಬ ನರ ಮನುಷ್ಯನೂ ಕಾಣಲಿಲ್ಲ. ಅದನ್ನು ನೋಡಿ ಬೆರಗಾಗುತ್ತಿದ್ದ ಪಿಂಗಳನು, "ನೀವು ಹೇಳಿದ ಇಖಿಬಿಲ್ಲಾ ಎಂಬ ಕೋಟೆ ಅದೇ




ಏನು ? " ಎಂದು ಹಸನ್‌ಗೋರಿಯನ್ನು ಕೇಳಿದನು.

"ಹೌದು, ಹೌದು. ಅದೇ ಅದು. ಆಕೋ ನೋಡು ಪಿಂಗಳಾ. ದೂರದಲ್ಲಿ ಗುಡ್ಡಗಳು ಕಾಣುತ್ತವಷ್ಟೆ ? ಆ ಗುಡ್ಡದ ಕಡೆಗೆ ಹೋಗುವ ರಾಜಮಾರ್ಗವು ನಿನ್ನ ಕಣ್ಣಿಗೆ ಕಾಣಿಸುತ್ತದೆಯೆ ? ಅದೇ ವರ್ತಕ ವೃತ್ತಿಯವರು ಟೆಹರಾನ್‌ನಿಂದ ಕೈರೋಗೆ ಹೋಗುವ ರಾಜಮಾರ್ಗ. ದಾರಿಯಲ್ಲಿರುವ ಈ ಕೋಟೆಯ ಪ್ರಾಂತವೇ ನೀರಿರುವ ಮಜಿಲೀ ಪ್ರದೇಶ. ಪ್ರಯಾಣಿಕರ ಆಯಾಸ ಪರಿಹಾರಕ್ಕೆ ಅದು ತಕ್ಕ ಜಾಗ. ಅಂಥವರಿಗೆ ನಡು ದಾರಿಯಲ್ಲಿ ಮರುಭೂಮಿಯ ಕಳ್ಳರಿಂದ ಅಪಾಯ ಬಾರದ ಹಾಗೆ ರಕ್ಷಿಸಲು ಇಫಿಖಿಲ್ಲಾ ಕೋಟೆ ಕಟ್ಟಲ್ಪಟ್ಟಿದೆ. ಇದನ್ನು ಕಾಪಾಡಿಕೊಂಡಿರಲು ಇನ್ನೂರು ಮಂದಿ ಸೈನಿಕರು ನಿಯೋಜಿಸಲ್ಪಟ್ಟಿದ್ದಾರೆ. ಅವರ ಸುಳಿವೇ ಕಾಣುವುದಿಲ್ಲವೇಕೋ ? ಏನಾಗಿ ಹೋದರೋ ? ಎಲ್ಲಿಯೂ ಯಾವ ಶಬ್ದವೂ ಇಲ್ಲದೆ ನಿರ್ಮಾನುಷ್ಯವಾಗಿದೆಯೆಂದರೆ ಆಶ್ಚರ್ಯವೇ ಸರಿ ! " ಎಂದನು ಹಸನ್‌ಗೋರಿ.

"ಯಾವುದಕ್ಕೂ ನಾವು ಖಿಲ್ಲಾದ ಒಳಗೆ ಹೋದರೆ ಹೊರತು ಗೊತ್ತಾಗಲಾರದು. ನಿಮಗೆ ಈ ಮೊದಲೇ ಬಂದ ಅನುಮಾನದ ಹಾಗೆ ಮರುಭೂಮಿಯ ಚೋರ ಹೆಗ್ಗಡೇಗೆ. ತನ್ನ ಕಡೆಯವರೊಂದಿಗೆ ಖಿಲ್ಲಾದ ಮೇಲೆ ಮೋಸದ ಧಾಳಿಮಾಡಿ ಅಲ್ಲಿದ್ದ ಸೈನಿಕರನ್ನು ಹತಮಾಡಿದನೋ ಏನೋ ? " ಎಂದನು ಪಿಂಗಳ.

"ಹಾಗೇ ನಡೆದಿರಬಹುದು. ಆದರೆ ಆ ಹೆಗ್ಗಡೇಗೆಯ ಕಡೆಯ ಒಬ್ಬನೂ ಕಾಣುವುದಿಲ್ಲವೇಕೆ ? ಅದೇ ಆಶ್ಚರ್ಯವಾಗಿದೆ" ಎಂದನು ಹಸನ್‌ಗೋರೀ.

ಪಿಂಗಳನು ತನ್ನ ಒಂಟೆಯನ್ನು ಬೇಗ ಬೇಗನೆ ಮುಂದೆ ನಡೆಸುತ್ತ, "ಗೋರಿ ಸಾಹೇಬ್ ! ನಾವು ಹೊರಗೇ ನಿಂತುಕೊಂಡು ಅಲ್ಲಿ ಏನು ನಡೆದಿದೆ ಎಂಬುದನ್ನು ಊಹಾಪೋಹ ಮಾಡಿಕೊಂಡು ಯಾವ ಪ್ರಯೋಜಜನವೂ ಇಲ್ಲ. ಇದೆಲ್ಲಾ ವ್ಯರ್ಥವಾದ ಶ್ರಮ. ಕೋಟೆಯ ಬಾಗಿಲವರೆಗೆ ಹೋದ ಹೊರತು ಅಲ್ಲಿ ಎಷ್ಟು ದೊಡ್ಡ ಭೀಕರ ಸಂಗ್ರಾಮ ನಡೆಯಿತೋ ಗೊತ್ತಾಗಲಾರದು. ಬಹುಶಃ ಮರುಭೂಮಿಯ ಹೆಗ್ಗಡೇಗೆ ಕಳ್ಳರು ಯಾವ ಬಾಗಿಲನ್ನೋ ಸುಟ್ಟುಬೂದಿ ಮಾಡಿ ಒಳಗೆ ನುಗ್ಗಿ ಅಲ್ಲಿದ್ದ ಎಲ್ಲಾ ಸೈನಿಕರನ್ನೂ ಬಿಡದೆ ಕೊಂದಿರಬೇಕು." ಎಂದನು.

"ಯುದ್ಧ ನಡೆದರೆ ದೊಡ್ಡ ಯುದ್ಧವೇ ನಡೆದಿರುತ್ತದೆ. ನಮ್ಮ ಸೈನಿಕರು ಸಾಧಾರಣದ ಯುದ್ಧಕ್ಕೆ ಮಣಿದು ಹೋಗುವ ತರಗತಿಯವರಲ್ಲ. ಕಳ್ಳರ ಗುಂಪು ನೂರಾರು ಮಂದಿಯದಾಗಿದ್ದೀತು. ಎಂತಹ ಘೋರವೋ ! " ಎಂದನು ಹಸನ್‌ಗೋರೀ.

ಕ್ರಮಕ್ರಮವಾಗಿ ಪಿಂಗಳನೂ ಹಸನ್‌ಗೋರಿಯೂ



ಕುಳಿತಿದ್ದ ಒಂಟೆಗಳು ಕೋಟೆಗೋಡೆಯ ಬದಿಯಲ್ಲಿ ಸ್ವಲ್ಪದೂರ ನಡೆದುವು. ಒಳಗಿನಿಂದೇನಾದರೂ ಶಬ್ದ ಬರುವುದೋ ಎಂದು ಇಬ್ಬರೂ ಕಿವಿ ತೀಡಿಕೊಂಡೇ ಇದ್ದರು. ಇಬ್ಬರೂ ಮುಖದ್ವಾರದ ಹತ್ತಿರ ಬಂದರು.

ಮುಖದ್ವಾರವು ಮುಚ್ಚಿಕೊಂಡು ಭದ್ರವಾಗಿಯೇ ಇದ್ದಿತು. ಅದನ್ನು ಎಂದಿನಂತೆ ಒಳಗಿನಿಂದ ತಾಳ ಹಾಕಿಕೊಂಡ ಹಾಗೆ ಕಾಣುತ್ತಿತ್ತು. ಹಾಗಾದರೆ ಒಳಗೆ ಜನರಿರಲೇಬೇಕು. ಅವರು ಕಳ್ಳರ ಗುಂಪಿನವರೋ, ನವಾಬನ ಸೈನಿಕರೋ ಎಂಬುದೇ ಪ್ರಶ್ನೆ.

ಬಹಳ ಪ್ರಶಾಂತವಾಗಿ ಕಾಣುವ ಆ ದೃಶ್ಯವನ್ನು ನೋಡಿ, ಇದ್ದಕ್ಕಿದ್ದ ಹಾಗೆ ಹಸನ್‌ಗೋರೀ ಒಮ್ಮೆಗೇ ಗಟ್ಟಿಯಾಗಿ ನಗಲು ತೊಡಗಿದನು. ನಗುತ್ತಾ ಒಂಟೆಯ ಮೇಲಿನಿಂದ ಕೆಳಕ್ಕೆ ಧುಮುಕಿ, ಹೊಟ್ಟೆ ಹಿಡಿದು ಸ್ವಲ್ಪಹೊತ್ತು ನಕ್ಕು, ಆಶ್ಚರ್ಯದಿಂದ ತನ್ನನ್ನು ನೋಡುವ ಪಿಂಗಳನನ್ನು ನೋಡಿ, "ನಾವು ಸುಮ್ಮಸುಮ್ಮನೆ ಭಾರಿಯಾಗಿ ಹೆದರಿದೆವು. ಎಂತಹ ಸೊಕ್ಕು ಬಡಿದ ತಂತ್ರಗಾರನಾದರೂ ಆ ಹೆಗ್ಗಡೇಗೆ ನಾಯಕನು ನಮ್ಮ ವೀರ ಸೈನಿಕರಿಗೆ ಮುಖಾಮುಖೀ ನಿಂತು ಯುದ್ಧಮಾಡುವ ಸಾಹಸ ಮಾಡಲಿಕ್ಕೇ ಇಲ್ಲ. ಇಷಿಖಿಲ್ಲಾ ಇಷ್ಟು ನಿರ್ಮಾನುಷ್ಯವಾಗಿರುವುದಕ್ಕೆ ಕಾರಣ ಈಗ ನನಗೆ ಅರ್ಥವಾಯಿತು." ಎಂದನು ನಗುತ್ತಾ.

ಅವನ ಮಾತಿನಲ್ಲಿ ಪಿಂಗಳನಿಗೆ ಯಾವ ಅರ್ಥವೂ ಕಾಣಲಿಲ್ಲ. ಹಸನ್‌ಗೋರಿ ಪಿಂಗಳನ ತೀರ ಸಮೀಪಕ್ಕೆ ಬಂದು, ಮುಖವನ್ನು ಪಿಂಗಳನ ಹತ್ತಿರ ತಂದು ಮೆಲ್ಲನೆಯಿಂದ, "ನಮ್ಮ ಸೈನಿಕರೆಲ್ಲಾ ಕುತ್ತಿಗೆ ಗುಳಿಯುವರೆಗೂ ಮಧುರವಾದ ಮದ್ಯ ಕುಡಿದು, ಆ ಮಯಕದಲ್ಲಿ ಮೈಮರೆತು ನಿದ್ದೆಮಾಡಿಕೊಂಡಿದ್ದಾರೆ. ಇದೇ ನಿಜ. ಬೇಕಾದರೆ ಪಂಥ!" ಎಂದನು ವಿಜಯಶಾಲಿಯ ಠೀವಿಯಲ್ಲಿ.

ಪಿಂಗಳನು ಅದನ್ನು ಒಪ್ಪದೆ ತಲೆಯನ್ನು ಆಡಿಸಿ, "ಹಾಗೆ ನೀವು ಖಂಡಿತವಾಗಿ ಹೇಳುವುದಾದರೆ ಆ ಮರುಭೂಮಿಯಲ್ಲಿ ಒಬ್ಬನೇ ಒಬ್ಬ ಸೈನಿಕನು ಮಾತ್ರ ಹೆಗ್ಗಡೇಗೆ ಕಳ್ಳರ ಕೈಗೆ ಹೇಗೆ ಸಿಕ್ಕಿಬಿದ್ದ? ಅವನು ಕೂಡಾ ಈ ಕೋಟೆಯ ರಕ್ಷಕರಲ್ಲೊಬ್ಬ ತಾನೆ?" ಎಂದು ಕೇಳಿದನು.

"ಅವನೊಬ್ಬ ಸೊಕ್ಕು ಹಿಡಿದು ಕೋಟೆಯೊಳಗಿನಿಂದ ಒಬ್ಬನೇ ಹೊರಗೆ ಸುತ್ತಲು ಹೋಗಿ ಎಲ್ಲೋ ಖರ್ಜೂರ ವೃಕ್ಷದ ಕೆಳಗೆ ಮಯಕದಲ್ಲಿ ಮಲಗಿರಬೇಕು, ಹೆಗ್ಗಡೇಗೆ ಅವನನ್ನು ಎತ್ತಿಕೊಂಡು ಅಲ್ಲಿ ಕೆಡವಿರಬೇಕು" ಎಂದನು ಹಸನ್‌ಗೋರೀ.

ಪಿಂಗಳನು ಏನೂ ಹೇಳದೆ ಸುಮ್ಮನೆ ನಿಂತನು. ಹಸನ್‌ಗೋರೀಗೆ ಮದ್ಯದ ನೆನಪು ಬಂದು ಹಾಗೆಲ್ಲಾ ಗಳಹುವನೇನೋ ಎಂದು ಅವನಿಗೆ ಅನುಮಾನವಾಯಿತು.




ಆಮೇಲೆ ಅವನು ಕೋಟೆಯ ದ್ವಾರದ ಕಡೆಗೆ ನಡೆಯುತ್ತ, "ಇರಬಹುದು. ನೀವು ಹೇಳುವ ಹಾಗೆ ನಡೆದರೆ ಒಳ್ಳೇದೇ ಆಯಿತು. ಅದರ ಬದಲಿಗೆ ಮತ್ತೇನೋ ಘೋರ ನಡೆದಿದ್ದರೂ ಇರಬಹುದು. ಯಾವುದಕ್ಕೂ ಮೊದಲು ಜಾಗರೂಕತೆಯಿಂದ ದ್ವಾರವನ್ನು ತೆರೆಯಿಸೋಣ. ಒಳಗಿನ ತಾಳ ತೆಗೆಯುವವರು ಯಾರೆಂದು ಕೂಡಲೇ ಗೊತ್ತಾಗಿಬಿಡುತ್ತದೆ." ಎಂದು ಬಾಗಿಲನ್ನು ಎರಡು ಕೈಗಳಿಂದಲೂ ಬಲವಾಗಿ ದೂಡಿದನು.

ತಾನು ಅಷ್ಟು ಬಲವನ್ನು ಉಪಯೋಗಿಸಿದ್ದು ವ್ಯರ್ಥವೇ ಎಂದು ಕೂಡಲೇ ಗೊತ್ತಾಯಿತು ಪಿಂಗಳನಿಗೆ. ಸುಮ್ಮನೆ ಮುಚ್ಚಿಕೊಂಡಿದ್ದ ಆ ಬಾಗಿಲುಗಳು ಕಿರ್ರನೆ ಶಬ್ದಮಾಡುತ್ತಾ ಹಿಂದಕ್ಕೆ ಜರುಗಿದುವು. ಒಂದು ಕೈ ಒಳಗೆ ತೂರುವಷ್ಟೇ ಜರುಗಿ ನಿಂತುಬಿಟ್ಟುವು. ಒಳಗೆ ಬಾಗಿಲ ಬದಿಯಲ್ಲೇ ಏನೋ ಚಿಟಿಚಿಟಿ ಶಬ್ದ ಹೊರಟಿತು. ಪಿಂಗಳನು ಕೆಟ್ಟದನಿಯಿಂದ "ಓಡಿರೋ ಓಡಿ!" ಎಂದು ಕೂಗಿ ಚಂಗನೆ ಹಿಂದಕ್ಕೆ ಹಾರಿ ಒಂದೇ ಸವನೆ ಓಡುವುದಕ್ಕೂ, ಆ ಕ್ಷಣದಲ್ಲಿ ಭೂಮ್ಯಾಕಾಶಗಳು ಒಡೆದ ಹಾಗೆ ಭಯಂಕರ ಶಬ್ದವಾಗುವುದಕ್ಕೂ ಸರಿ ಹೋಯಿತು. ಬಾಗಿಲ ಹಿಂದೆ ದಟ್ಟವಾಗಿ ಜಡಿದಿಟ್ಟಿದ್ದ ತುಪಾಕೀ ಮದ್ದಿನ ರಾಶಿ, ಸಿಡಿದು ಬಾಗಿಲನ್ನೂ, ಕೋಟೆಯ ಗೋಡೆಯ ಮುಂದಿನ ಭಾಗವನ್ನೂ ಉರುಳಿಸಿ ಎಂಟು ದಿಕ್ಕುಗಳಿಗೂ ಚೆದರಿಸಿತು.

ಆ ಧ್ವನಿಯನ್ನೂ, ಅದರೊಂದಿಗೆ ಹೊರಟ ಉರಿಯನ್ನೂ ಹೊಗೆಯನ್ನೂ ನೋಡಿ ಅಲ್ಲಿದ್ದವರೆಲ್ಲಾ ನಿಶ್ಚೇಷ್ಟಿತರಾದರು. ಕೋಟೆಯ ಬಾಗಿಲಿನ ತುಂಡುಗಳೂ, ಗೋಡೆಯ ಕಲ್ಲುಗಳೂ ತಗಲಿ ಅನೇಕರು ಬಿದ್ದು ಬಾಧೆಯಿಂದ ಹಾಹಾಕಾರ ಮಾಡುತ್ತ ಹೊರಳತೊಡಗಿದರು. ಗಾಯಗೊಂಡ ಒಂಟೆಗಳು ಕಿವಿ ತೂತಾಗುವಂತೆ ಅರಚುತ್ತಾ, ಸವಾರರನ್ನು ಬೀಳಿಸಿ ಸಿಕ್ಕಾಬಟ್ಟೆ ಓಡಿದುವು. ಕ್ಷಣಮಾತ್ರದಲ್ಲಿ ಮುತ್ತಿಕೊಂಡ ಕರಿಹೊಗೆಯಿಂದ ಯಾರಿಗೆ ಯಾರೂ ಕಾಣಲಿಲ್ಲ. ಹೊಗೆಯನ್ನೂ, ಬೆಂಕಿಯ ಕಡಿಗಳನ್ನೂ ಸುರುಳಿ ಸುರುಳಿಯಾಗಿ ಒಯ್ಯುವ ಗಾಳಿ ಬೇರೆ. ಜೋರಾಗಿ ಬೀಸುವ ಗಾಳಿಯಿಂದ ಹೊಗೆಯ ದಟ್ಟತೆ ಸಾಂದ್ರವಾಗಿ ಆಕಾಶದೊಂದಿಗೆ ಸೇರಿತು. ಮೊದಲೇ ದೂರ ಓಡಿದ ಪಿಂಗಳನು, ಅಲ್ಲಿ ನಡೆದ ಬೀಭತ್ಸವನ್ನು ನೋಡಿದನು. ಒಂಟೆಗಳ ಪಟಾಲಿನ ಕೆಲವರು ಸತ್ತುಹೋಗಿ ಬಿಟ್ಟಿದ್ದರು. ಕೆಲವರು ಸಾಯುವ ಹಾಗೆ ನರಳುತ್ತಿದ್ದರು. ಆ ಭಯಂಕರ ದೃಶ್ಯ ನೋಡಿ ನಡುಗುತ್ತಿರುವ ಪಿಂಗಳನು, ಬೇಗದಲ್ಲೇ ಪ್ರಜ್ಞೆ ತಂದುಕೊಂಡು ಹಸನ್‌ಗೋರೀ ಎಲ್ಲಿರುವನೆಂದು ಹುಡುಕತೊಡಗಿದನು. ಸಿಡಿತದ ವೇಗದಲ್ಲಿದ್ದ ಗಾಳಿ ಹಸನ್‌ಗೋರಿಯನ್ನು ಹಾರಿಸಿ ತುಸುದೂರದಲ್ಲಿದ್ದ ಖರ್ಜೂರದ ಮರದ ಹತ್ತಿರ

ಹಾಕಿತ್ತು. ಅಲ್ಲಿ ಬಿದ್ದ ಹಸನ್‌ಗೋರಿ ಮೈ ಕೈ ನಿಮಿರಿಕೊಂಡು ಮೆಲ್ಲನೆ ಏಳುತ್ತ ಸುತ್ತುಮುತ್ತಲೂ ನೋಡುತ್ತ, ಪಿಂಗಳನನ್ನು ನೋಡಿ ತಾನಿರುವ ಸ್ಥಳ ವನ್ನು ಸೂಚಿಸುವಂತೆ ಗಟ್ಟಿಯಾಗಿ ಕೂಗಿದನು.

ಏಳಲಾಗದೆ ಮುಗ್ಗರಿಸಿ ಬೀಳುವ ಹಸನ್ ಗೋರಿಯ ಬಳಿಗೆ ಪಿಂಗಳನು ಓಡಿಬಂದು, ಆಸರೆ ಗೊಟ್ಟು ನಿಲ್ಲಿಸುತ್ತ, "ದೊಡ್ಡ ಗಾಯಗಳಾಗಿ ವೆಯೇ ?" ಎಂದು ಕೇಳಿದನು.

"ಅಂಥಾ ಗಾಯವೇನೂ ಆಗಿಲ್ಲಪ್ಪಾ! ಮರಳಿನ ಮೇಲೆ ತಾನೇ ಬಿದ್ದೆ ? ಮದ್ದು ಸಿಡಿದಾಗ ಗಾಳಿಯ ಶಕ್ತಿ ಇಷ್ಟು ದೂರ ಹಾರಿಸಿಬಿಟ್ಟಿತು. ಛೇ ಛೇ! ಈದಿನ ಬೆಳಿಗ್ಗೆ ಎದ್ದ ಸಮಯ ಚೆನ್ನಾಗಿತ್ತು! ಜೀವ ಉಳಿದಿರುವುದೊಂದು ಅದೃಷ್ಟ!" ಎಂದನು ಹಸನ್‌ಗೋರೀ.

"ಅದಕ್ಕೆ ಸಂದೇಹವೇ ಇಲ್ಲ, ಹಸನ್‌ಗೋರೀ ಸಾಹೇಬರೇ! ಕೋಟೆಯ ಬಾಗಿಲು ಹಗುರಾಗಿ ಹಿಂದೆ ಸರಿದಾಗಲೇ ಅಲ್ಲೇನೋ ಅಪಾಯವಿದೆ ಯೆಂದು ನಾನು ತಿಳಿದುಕೊಂಡೆ. ಅದಕ್ಕೇ ನಾನು ಗಟ್ಟಿಯಾಗಿ ದೂರ ಓಡಿರೋ ಎಂದು ಕೂಗಿ ಓಡಿದೆ. ಆದರೂ ದುರದೃಷ್ಟದಿಂದ ನಾನು ಕೂಗು ವಾಗಲೇ ಕೆಲವರಿಗೆ ಪ್ರಾಣ ಹೋಗುವಂತಾಯಿತು. ಎಂದು ಹೇಳಿ ಪಿಂಗಳನು ಹಿಂದಿರುಗಿ ನೋಡಿ, "ಓಡಲಿಕ್ಕೇ ಸಮಯವಿಲ್ಲದಂತೆ, ಕಣ್ಣುಮುಚ್ಚಿ ಬಿಡಿಸುವುದರೊಳಗೆ ಸಿಡಿದುಬಿಟ್ಟಿತು! ಅಬ್ಬಾ! ಎಂಥಾ ಸರ್ವ ನಾಶವಾಯಿತು! ಅನೇಕವಾಗಿ ಮುಕ್ಕಾಲು ಭಾಗದಷ್ಟು ಸೈನಿಕರು ಅನ್ಯಾಯವಾಗಿ ಸತ್ತಿರಬೇಕು!" ಎಂದನು.

ಹಸನ್‌ಗೋರಿ ಸುಧಾರಿಸಿಕೊಂಡು ಎದ್ದು ನಿಂತು, ದುಸ್ತುಗಳಿಗೆ ಹಿಡಿದ ಧೂಳು ಮರಳುಗಳನ್ನು ಕೊಡರಿಕೊಳ್ಳುತ್ತ, "ಇದು ಆ ಹೆಗ್ಗಡೇಗೆ ಕಳ್ಳ ನಮ್ಮನ್ನೆಲ್ಲಾ ಹತಮಾಡಲಿಕ್ಕೆ ಹೂಡಿದ ದುಸ್ತಂತ್ರ.




ಕೋಟೆಯೊಳಗಿದ್ದ ಸೈನಿಕರೆಲ್ಲರನ್ನೂ ನಾಶಮಾಡಿದ ಮೇಲೆ ನಮ್ಮನ್ನು ಸಾಯಿಸಲು ಈ ಕಪಟೋಪಾಯ. ವನ್ನು ಮಾಡಿದ್ದಾನೆ. ಇನ್ನೀಗ ನಾವು ಮಾಡ ಬೇಕಾದುದು, ಬದುಕಿ ಉಳಿದ ಸೈನಿಕರೊಂದಿಗೆ ಆ ಕ್ರೂರಕರ್ಮಿಯನ್ನು ಹುಡುಕಿ ಬೇಟೆಯಾಡಿ ಹಿಡಿದು ಚಿತ್ರಹಿಂಸೆಗೆ ಗುರಿಪಡಿಸಿ ಕೊಲ್ಲಬೇಕು. ಅಷ್ಟು ಮಾಡದೆ ನವಾಬರ ಮುಖ ನೋಡ ಲಾಗದು" ಎಂದನು ಉದ್ರೇಕದಿಂದ.

ಪಿಂಗಳನೂ ಹಸನ್‌ಗೋರಿಯೂ ಕೂಡಿ ತಿರುಗಾಡಿ ಗಾಯಗೊಂಡು ಬಿದ್ದ ಸೈನಿಕರನ್ನೆಲ್ಲಾ ಕೋಟೆಯ ಗೋಡೆಯ ನೆರಳಿಗೆ ಎತ್ತಿ ಎತ್ತಿ ತಂದು ಇರಿಸಿದರು. ಅವರ ಗಾಯಗಳಿಗೆ ಕಟ್ಟುಹಾಕಿ ಬೇರೆ ಕಡೆಗೆ ನಡೆಸಲು ಕೆಲವರನ್ನು ನಿಯೋಗಿಸಿದರು. ಉಳಿದವರೊಂದಿಗೆ ಅವರಿಬ್ಬರೂ ಇಫಿಖಿಲ್ಲಾ ಕೋಟೆಯ ಒಳಗೆ ಪ್ರವೇಶ ಮಾಡಿದರು. ಆ ಖಿಲ್ಲೆಯ ಒಳ ಪ್ರದೇಶದಲ್ಲಿ ಅವರಿಗೆ



ಇದಿರಾದ ದೃಶ್ಯ ಅವರಿಬ್ಬರನ್ನೂ ಸ್ಥಾಣುವಿನಂತೆ ಬೆರಗುಪಡಿಸಿತು. ಅಲ್ಲಿದ್ದ ಪ್ರತಿಭವನವೂ, ಗುಡಾರಗಳೂ ಸುಟ್ಟು ಹಾಕಲ್ಪಟ್ಟಿದ್ದುವು. ಕರಿಹಿಡಿದ ಮೊಂಡು ಗೋಡೆಗಳಷ್ಟೇ ಇದ್ದುವು. ಎಲ್ಲಿ ನೋಡಿದರೂ ಚೆಲ್ಲಾಚೆದರಾಗಿ ಬಿದ್ದಿದ್ದ ದುಸ್ತುಗಳು. ಆಯುಧಗಳ ಭಾಗಗಳು. ಅಡಿಗಡಿಗೂ ಸತ್ತುಬಿದ್ದ ಶವಗಳು! “ಪಿಂಗಳಾ! ಏನು ಘೋರ ದೃಶ್ಯ ಇದು! ಒಬ್ಬನೇ ಒಬ್ಬ ಸೈನಿಕನೂ ಬದುಕಿರುವ ಸೂಚನೆ ಇಲ್ಲ. ಇಲ್ಲಿ ನಿಜವಾಗಿ ಏನು ನಡೆಯಿತೆಂದು ಹೇಳುವವರೇ ಇಲ್ಲದಾಗಿದೆ. ಆ ಹೆಗ್ಗಡೇಗೆಯೇ ಮುಂದೆ ಬಂದು ಹೇಳಬೇಕು. ಮೋಸದ ವೀರನು ಇದಿರಿಗೇಕೆ ಬಂದಾನು? ಇಷ್ಟು ದೊಡ್ಡ ಸೈನ್ಯವನ್ನೇ ನಾಶಮಾಡಿದನೆಂದರೆ ಈ ಖಿಲ್ಲೆಯೊಳಗೆ ಅವನಿಗೆ ಯಾರೋ ಮಿತ್ರನೊಬ್ಬ ಇದ್ದಿರಬೇಕು. ಮಹಾ ದ್ರೋಹಿ!” ಎಂದನು ಹಸನ್‌ಗೋರೀ.

“ಇದ್ದರೂ ಇರಬಹುದು” ಎಂದು ಪಿಂಗಳನು ಸುತ್ತಲೂ ಒಂದುಸಾರಿ ಪರೀಕ್ಷಿಸಿ ನೋಡಿ, “ಇನ್ನು ನಾವು ಇಲ್ಲಿ ಸುಮ್ಮನೆ ತಡಮಾಡುವುದೇಕೆ? ಆ ಹೆಗ್ಗಡೇಗೆಯನ್ನು ಹುಡುಕಿ ಬೆಂಬತ್ತೋಣವೆ? ಅವನು ಈ ವಿಸ್ತಾರವಾದ ಬೆಂಗಾಡಿನಲ್ಲಿ ಯಾವ ದಿಕ್ಕಿಗೆ ಹೋದನೆಂಬುದನ್ನು ಹೇಗೆ ತಿಳಿಯಲು ಸಾಧ್ಯ?” ಎಂದು ಕೇಳಿದನು.

“ಅದಕ್ಕೇನೂ ಕಷ್ಟವಿಲ್ಲ” ಎಂದು ಹಸನ್ ಗೋರೀ ಖಿಲ್ಲೆಯೊಳಗಿನಿಂದ ಹೊರಗೆ ಹೋದನು. ಆಮೇಲೆ ಅವನ ಆಜ್ಞೆಯಂತೆ ಐದಾರು ಮಂದಿ ಸೈನಿಕರು ಮರುಭೂಮಿಯ ಎಲ್ಲಾ ದಿಕ್ಕುಗಳಿಗೂ ಸ್ವಲ್ಪ ದೂರ ಹೋಗಿ, ಸ್ವಲ್ಪ ಹೊತ್ತಿಗೆ ಹಿಂದಿರುಗಿ ಬಂದರು.

ಮರಳಿನಲ್ಲಿ ಮೂಡಿದ ಒಂಟೆಗಳ ಹಜ್ಜೆಯ ಗುರುತುಗಳ ಮೂಲಕ ಹೆಗ್ಗಡೇಗೆ ಕಳ್ಳನ ಗುಂಪು ಯಾವ ಕಡೆಗೆ ಹೋಗಿದೆ ಎಂಬುದನ್ನು ಅವರು ತಮ್ಮ ನಾಯಕನಿಗೆ ತಿಳಿಸಿದರು.

ಹಸನ್ ಗೋರೀ ಪಿಂಗಳನಿಗೆ ಎರಡು ಮೂರು ಹರದಾರಿಗಳಷ್ಟು ದೂರದ ಗುಡ್ಡಗಳನ್ನು ತೋರಿಸುತ್ತ “ಹೆಗ್ಗಡೇಗೆ ನೇರಾಗಿ ಆ ಬೆಟ್ಟಗಳಲ್ಲಿರುವ ಗುಹೆಗಳ ಕಡೆಗೇ ಹೋಗಿದ್ದಾನೆ. ಅಂತಹ ಸ್ಥಳಗಳಲ್ಲಿಯೇ ಅವನು ಅಡಗಿರುವುದೆಂದು ಕೇಳಿದ್ದೇನೆ. ತಾನು ಇಲ್ಲಿ ಸಾಧಿಸಿದ ವಿಜಯಕ್ಕೆ ಸಂಭ್ರಮಿಸಿ, ಈಗ ಅವನು ತನ್ನ ಕಾಲವನ್ನು ಸಂತೋಷದ ಕುಣಿತದಲ್ಲಿ ಕಳೆಯುತ್ತಿದ್ದಾನು. ಆ ಖಿಲ್ಲೆಯ ಬಾಗಿಲಿನ ಹತ್ತಿರ ಇಟ್ಟು ಹೋದ ಸಿಡಿಮದ್ದುಗಳಿಗೆ ನಾವೆಲ್ಲಾ ಆಹುತಿಯಾಗಿ ಸತ್ತಿದ್ದೇವೆಂದೇ ಅವನ ನಂಬುಗೆ. ನಿಜಕ್ಕೂ ಕ್ಷಣ ತಡೆದಿದ್ದರೆ ನಾವೆಲ್ಲಾ ಆಹುತಿಯಾಗುತ್ತಿದ್ದೆವಷ್ಟೆ?” ಎಂದನು.

ಹೌದೆಂದು ಪಿಂಗಳನು ಒಪ್ಪಿಕೊಂಡನು,

ಅಂತೂ ಹಸನ್ ಗೋರೀ ಅಳಿದುಳಿದ ಸೈನಿಕರನ್ನು ಕರೆದುಕೊಂಡು, ಪಿಂಗಳನೊಂದಿಗೆ ಆ ಬೆಟ್ಟ

ಗಳ ಕಡೆಗೆ ಪ್ರಯಾಣ ಮಾಡಲು ತೊಡಗಿದನು. ಸುಮಾರು ಒಂದು ಗಂಟೆ ಹೊತ್ತು ಕಳೆದ ಮೇಲೆ ಯಾವುದೋ ಒಂದು ಕಣಿವೆಯ ಹತ್ತಿರ ಬಂದರು. ಪಿಂಗಳನು ಅಲ್ಲಿಯ ಬೆಟ್ಟದ ಎರಡು ಬದಿಗಳಲ್ಲಿಯೂ ನೆಟ್ಟಗೆ ನಿಂತ ಬಂಡೆಗಲ್ಲುಗಳನ್ನು ನೋಡುತ್ತ, "ಹಸನ್ ಗೋರೀ ಸಾಹೇಬರೆ! ನಾವು ಇಲ್ಲಿ ಎರಡು ಭಾಗವಾಗಿ ಸೀಳಿಕೊಳ್ಳುವುದು ಒಳ್ಳೆಯದೆಂದು ತೋರುತ್ತದೆ. ನಮ್ಮ ವಾಹನಗಳನ್ನು ಇಲ್ಲಿಯೇ ಬಿಟ್ಟು ಬಿಡೋಣ. ಅಲ್ಲಲ್ಲಿ ಕಲ್ಲಿನ ರಾಶಿಗಳು ತುಂಬಾ ಇವೆ. ಯಾವ ರಾಶಿಯ ಹಿಂದೆ, ಯಾವ ಗುಹೆಯಲ್ಲಿ ಯಾರಿದ್ದಾರೆಂದು ಹುಡುಕಲಿಕ್ಕೆ ಹಾಗೆ ಮಾಡುವುದೇ ಒಳ್ಳೆಯದು. ಬೇಕಾದಾಗ ಸಂಕೇತದ ಕೊಂಬನ್ನು ಊದಿ ಒಂದಾಗಿ ಸೇರಿ ಅವರನ್ನೆಲ್ಲ ಹತಮಾಡಿ ಹಾಕೋಣ. ಆಗದೆ?" ಎಂದನು.

ಆ ಉಪಾಯಕ್ಕೆ ಹಸನ್ ಗೋರೀ ಅಂಗೀಕರಿಸಿದನು. ಪಿಂಗಳನು ಕೆಲವು ಮಂದಿ ಸೈನಿಕರನ್ನು ತನ್ನೊಂದಿಗೆ ಕರೆದುಕೊಂಡು ಗುಡ್ಡದಕಲ್ಲುಗಳನ್ನು ಏರುತ್ತ ಇಳಿಯುತ್ತ ಹೆಗ್ಗಡೇಗೆಯನ್ನು ಹುಡುಕ ತೊಡಗಿದನು. ಹಸನ್ ಗೋರೀ ಕೆಲವರೊಂದಿಗೆ ಇನ್ನೊಂದು ಕಡೆಗಾಗಿ ಹೋದನು.

ಹಾಗೆ ಹೋಗುವಾಗ ಪಿಂಗಳನಿಗೆ ಹಠಾತ್ತಾಗಿ ತಾನಿರುವ ಸ್ಥಳದ ಕೆಳಭಾಗದಲ್ಲಿ ಏನೋ ಶಬ್ದ ಕೇಳಿಸಿತು. ಅದೊಂದು ಕೋಲಾಹಲ ಶಬ್ದದಂತಿತ್ತು. ಪಿಂಗಳನು ತನ್ನ ಸೈನಿಕರಿಗೆ ಸನ್ನೆ ಮಾಡಿ, ಎತ್ತರವಾದ ಬಂಡೆಯನ್ನೇರಿ ಕೆಳಗೆ ನೋಡಿದನು.

ಸಮತಲವಾಗಿದ್ದ ಒಂದು ಪ್ರದೇಶದಲ್ಲಿ ಅನೇಕ ಮಂದಿ ಗುಂಪಾಗಿ ಸೇರಿ ಏನೇನೋ ಹಾಡುತ್ತ ನಾಟ್ಯವಾಡುತ್ತಿದ್ದರು. ಅವರು ಧರಿಸಿದ ದುಸ್ತುಗಳೂ ಕೇಕೇ ಹಾಕಿ ಕೂಗುವ ಮಾತಿನ ಅರ್ಥಗಳೂ ಅವರು ಆ ಹೆಗ್ಗಡೇಗೆ ಕಳ್ಳನ ಗುಂಪಿನವರೇ ಎಂದು



ಪಿಂಗಳನಿಗೆ ಅರ್ಥವಾಯಿತು. ಕೂಡಲೇ ಅವರು ಈ ಮೊದಲೇ ಮಾಡಿಕೊಂಡ ಗುರುತಿನಂತೆ ಪಿಂಗಳನು ಸಂಕೇತದ ಕೊಂಬನ್ನು ಊದಿದನು.

ಆ ಧ್ವನಿ ಕೆಳಗೆ ನಲಿದಾಡುವವರಿಗೂ ಕೇಳಿತೆಂದು ಕಾಣುತ್ತದೆ. ಅಲ್ಲಿಯ ನಾಟ್ಯ ಹಾಡು ಕೋಲಾಹಲಗಳೆಲ್ಲ ಒಮ್ಮೆಗೇ ನಿಂತು ಹೋದುವು. ಅದನ್ನು ನೋಡಿ ಪಿಂಗಳನಿಗೆ ಸ್ವಲ್ಪಗಾಬರಿಯೂ ಆಯಿತು. ಇನ್ನು ತಡಮಾಡಿ ಪ್ರಯೋಜನವಿಲ್ಲವೆಂದು ಕೊಂಡು ಪಿಂಗಳನು ದೊಡ್ಡದೊಂದು ಬಂಡೆಗಲ್ಲನ್ನು ಕೆಳಗಿರುವ ಕಳ್ಳರ ಮೇಲೆ ಉರುಳಿಸುತ್ತ, ತನ್ನ ಸೈನಿಕರಿಗೆ ಕೂಡಾ ಕಲ್ಲುಗಳನ್ನು ಉರುಳಿಸಲು ಆಜ್ಞೆ ಮಾಡಿದನು.

ಪಿಂಗಳನು ಉರುಳಿಸಿದ ಕಲ್ಲು ನೆಲವನ್ನು ಮುಟ್ಟುವುದರೊಳಗೇ, ಸೊಂಯ್ಯ ಸೊಂಯ್ಯನೆ ಕೆಲವು ಬಾಣಗಳು ಬಂದು ಅವನಿರುವ ಸ್ಥಳದ ಕಲ್ಲುಗಳಿಗೆ ತಾಗಿದುವು. ಪಿಂಗಳನು ತಟ್ಟನೆ ಕಲ್ಲುಗಳ

ಮರೆಯಲ್ಲಿ ತಪ್ಪಿಸಿಕೊಂಡನು. ಅವನು ಬಾಗಿ ನೋಡಿದಾಗ ಕೆಲವಂದಿ ಕಳ್ಳರು ಈಟಿಗಳನ್ನು ಎತ್ತಿಕೊಂಡು ಗಟ್ಟಿಯಾಗಿ ವೀರಗರ್ಜನೆ ಮಾಡುತ್ತ ಗುಡ್ಡವನ್ನೇರಿ ಬರುತ್ತಿದ್ದರು. ಆಗ ಮತ್ತೊಂದು ದಿಕ್ಕಿನಿಂದ ಕೆಲವು ಬಂಡೆ ಕಲ್ಲುಗಳು ಹೊರಳುತ್ತ ಅವರ ಮೇಲೆ ಬೀಳತೊಡಗಿ ಅವರನ್ನು ಬೆದರಿಸುತ್ತಿದ್ದುವು.

ತನ್ನ ಸಂಕೇತ ಧ್ವನಿ ಹಸನ್ ಗೋರೀಗೆ ತಿಳಿಯಿತೆಂದು ಗೊತ್ತಾಗಿ ಪಿಂಗಳನಿಗೆ ಬಹಳ ಸಂತೋಷವಾಯಿತು. ಕೂಡಲೇ ಅವನು ತನ್ನ ಎಲ್ಲಾ ಬಲವನ್ನೂ ಸೇರಿಸಿ ಕಳ್ಳರ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಹೊರಳಿಸುತ್ತ ಕೆಳಗಿಳಿಯ ತೊಡಗಿದನು. ಹಸನ್ ಗೋರೀಯೊಂದಿಗಿದ್ದ ಸೈನಿಕರು ಜೋರು ಜೋರಾಗಿ ಸಿಂಹನಾದ ಮಾಡುತ್ತ ಬೆಟ್ಟ ಕಲ್ಲುಗಳ ಮೇಲೆ ಲಂಘಿಸಿಕೊಂಡು ಕಳ್ಳರ ಗುಂಪಿನ ಕಡೆಗೆ ಓಡುತ್ತಿದ್ದರು.

ಪಿಂಗಳನು ಸಹಾ ತನ್ನ ಸೈನಿಕರೊಂದಿಗೆ ಕಳ್ಳರು ಪ್ರಯೋಗಿಸುವ ಬಾಣಗಳನ್ನು ತಪ್ಪಿಸಿಕೊಳ್ಳುತ್ತ ಮುಂದೆ ಮುಂದೆ ಓಡುತ್ತಿದ್ದನು. ಎರಡು ಗುಂಪುಗಳೂ ಬೆಟ್ಟದ ಕೆಳಭಾಗದಲ್ಲಿರುವ ಸಮತಲ ಪ್ರದೇಶವನ್ನು ಸೇರುವಷ್ಟರಲ್ಲಿ ಎಲ್ಲೆಲ್ಲಿದ್ದ ಕಳ್ಳರು ಅಲ್ಲಲ್ಲೇ ಬೆದರಿ ಬೆದರಿ ಓಡಿದರು. ಆದರೆ ಹಿಂದೆ ಬಿದ್ದ ಕೆಲವಂದಿ ಕಳ್ಳರನ್ನು ಹಸನ್ ಗೋರಿಯ ಸೈನಿಕರು ತಮ್ಮ ಕೈಯಲ್ಲಿದ್ದ ಈಟಿಗಳಿಂದ ತಿವಿದು ಸಾಯಿಸಿಬಿಟ್ಟರು.

"ಪಿಂಗಳಾ ! ಕತ್ತಲೆ ಕವಿಯುತ್ತಾ ಇದೆ. ಇಲ್ಲಿ ಇನ್ನು ಕಳ್ಳರ ಬೆನ್ನು ಹತ್ತಲು ಸಾಧ್ಯವಾಗದು. ಈ ರಾತ್ರಿ ಇಲ್ಲಿಯೇ ಎಲ್ಲಿಯಾದರೂ ಮಜಿಲೀ ಹಾಕಿ. ಬೆಳಗಾದ ಕೂಡಲೇ ಅವರ ಜಾಡು ತಿಳಿದು ಒರೆಸಿಹಾಕೋಣ. ಏನನ್ನುವಿ ?" ಎಂದನು ಹಸನ್ ಗೋರೀ.

ಪಿಂಗಳನಿಗೆ ಕೂಡಾ ಹಾಗೆ ಮಾಡುವುದೇ ಒಳ್ಳೆಯದೆನಿಸಿತು. ಅವನು ಅಲ್ಲಿ ಮೇಜಿಯ ಆಕಾರದಲ್ಲಿದ್ದ ಒಂದು ಅಗಲವಾದ ಬಂಡೆಯಲ್ಲಿ ಕುಳಿತುಕೊಳ್ಳಲು ನೋಡುವಾಗ, "ಯಾವ ಪಿಂಗಳ ನಿದ್ದಾನೆ ಇಲ್ಲಿ ? ಅವಂತೀ ನಗರದ ಜಾಲರಿ ಪಿಂಗಳ ನಲ್ಲವಷ್ಟೆ ?" ಎಂಬುದೊಂದು ಪ್ರಶ್ನೆ ಪಕ್ಕದಲ್ಲಿದ್ದೊಂದು ಬಂಡೆ ಗುಡ್ಡದಿಂದ ಕೇಳಿಸಿತು.

"ಯಾರದು ? ಪದ್ಮಪಾದರ * ಧ್ವನಿಯಾಗಿದೆಯಲ್ಲಾ !" ಎನ್ನುತ್ತಾ ಪಿಂಗಳನು ಆ ಪ್ರಶ್ನೆ ಬಂದ ಕಡೆಗೆ ತಿರುಗಿದನು.

ಆಳೆತ್ತರದ ಒಂದು ಬಂಡೆಯಾಚೆಗಿಂದ ಮಾಂತ್ರಿಕ ಪದ್ಮಪಾದನು ನಗುತ್ತ ಮುಂದೆ ಬರುವುದು ಕಂಡಿತು. (ಇನ್ನೂ ಇದೆ)

